## 'ಸಿದ್ಧಗಂಗಾ' ಚಿರಾಯುವಾಗಲೆಂದು

### ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು

747. ಶ್ರೀ ಎಸ್. ರಾಮಯ್ಯ ಮಾಜಿ ಅಧ್ಯಕ್ಷರು, ದೇವನಹಳ್ಳಿ, ಬೆಂಗಳೂರು ಜಿಲ್ಲೆ.

748. ಶ್ರೀ ಬಿ. ಎಂ. ನಂಜುಂಡಪ್ಪ S/o ಬಿ. ಮಲ್ಲಯ್ಯ, ದೇವನಹಳ್ಳಿ, ಬೆಂಗಳೂರು ಜಿಲ್ಲೆ.

749. ಶ್ರೀ ಬಿ. ಎಂ. ಮುನಿಸ್ವಾಮಪ್ಪ., ದೇವನಹಳ್ಳಿ, ಬೆಂಗಳೂರು ಜಿಲ್ಲೆ.

750. ಶ್ರೀ ನಾಗರಾಜಪ್ಪ S/o ಮಲ್ಲಪ್ಪ ಕೋಡಿಮಂಚೇನಹಳ್ಳಿ, ದೇವನಹಳ್ಳಿ ತಾ॥ ಬೆಂಗಳೂರು ಜಿಲ್ಲೆ.

751. ಶ್ರೀ ಎನ್. ಅಪಲಪ್ಪ ಕೆ. ಭಾಷಂ ನಗರ, ಶ್ರೀರಾಂಪುರ ಬೆಂಗಳೂರು-21

752. ಶ್ರೀ ಮುನಿಚೌಡಪ್ಪ ಎಲೆಕ್ಟ್ರಿಕ್ ಕಂಟ್ರಾಕ್ಟರ್ ಪರಸೇನಹಳ್ಳಿ, ಬೆಂಗಳೂರು ಜಿಲ್ಲೆ.

753. ಶ್ರಿ ಎ. ಸತ್ಯಮೂರ್ತಿ S/o ಶ್ರೀ ಅಣ್ಣಯ್ಯಪ್ಪ. ಮರ್ಚೆಂಟ್, ದೇವನಹಳ್ಳಿ, ಬೆಂಗಳೂರು ಜಿಲ್ಲೆ.

754. ಶ್ರೀ ಅಶ್ವತ್ಥಪ್ಪ S/o ಶ್ರೀ ನಂಜಪ್ಪ ಬೊಮ್ಮವಾರ, ದೇವನಹಳ್ಳಿ ತಾ॥ ಬೆಂಗಳೂರು ಜಿಲ್ಲೆ.

755. ಶ್ರೀ ಹೆಚ್. ನಾರಾಯಣಪ್ಪ ಛೇರ್‌ಮನ್, ಹೊಸಹಳ್ಳಿ, ಬೆಂಗಳೂರು ಜಿಲ್ಲೆ.

756. ಶ್ರೀ ಚಿಕ್ಕಶಾಮಪ್ಪ S/o ಮುನಿಸ್ವಾಮಪ್ಪ ಅಣ್ಣೇಶ್ವರ, ಬೆಂಗಳೂರು ಜಿಲ್ಲೆ.

757. ಶ್ರೀ ಉತ್ತನಲ್ಲಪ್ಪ S/o ಮುನಿಶಾಮಪ್ಪ ಅಣ್ಣೇಶ್ವರ, ದೇವನಹಳ್ಳಿ ತಾ॥ ಬೆಂಗಳೂರು ಜಿಲ್ಲೆ.

758. ಶ್ರೀ ಜಿ. ಕೃಷ್ಣಮೂರ್ತಿ, ಸೆಕ್ರೆಟರಿ ರಾಮಕೃಷ್ಣರೂರಲ್ ಹೈಸ್ಕೂಲ್, ಬೆಟ್ಟಕೋಟೆ, ಬೆಂಗಳೂರು ಜಿಲ್ಲೆ.

759. ಶ್ರೀ ಎ. ನಾರಾಯಣಸ್ವಾಮಿ S/o ಶ್ರೀ ಅವಲಪ್ಪ ಮೇಗಲಕೋಟೆ, ದೇವನಹಳ್ಳಿ, ಬೆಂಗಳೂರು ಜಿಲ್ಲೆ.

760. ಶ್ರೀ ಎನ್ ಆಂಜನಪ್ಪ S/o ನಂಜುಂಡಪ್ಪ ಹಿತ್ತರಹಳ್ಳಿ, ಬೆಂಗಳೂರು ಜಿಲ್ಲೆ.

761. ಶ್ರೀ ಎನ್. ಗೋಪಾಲಯ್ಯ S/o ಶ್ರೀ ನಂಜುಂಡಪ್ಪ ಅಣ್ಣೇಶ್ವರ, ದೇವನಹಳ್ಳಿ ತಾ॥ ಬೆಂಗಳೂರು ಜಿಲ್ಲೆ.

(ಮುಂದುವರಿಯುತ್ತದೆ)



## ಶ್ರೀ ವಾಣಿ

ಪ್ರತ್ಯಕ್ಷ ಗೋಚರವಾದ ದೇಹ, ಅನುಭವ ವೇದ್ಯವಾದ ಮನಸ್ಸು ಅರ್ಥಾತ್ ಅಂತಃಕರಣ ಇವುಗಳ ಅರಿವಿನಿಂದಲೂ ಪರಿಪೂರ್ಣ ಸ್ವರೂಪದ ತಿಳುವಳಿಕೆಯಾಗಲಾರದು. ಮಾನವನ ಬುದ್ಧಿಗೆ ಹೊಳೆಯುವ ಅನೇಕ ಪ್ರಶ್ನೆಗಳಿಗೆ ಇವುಗಳಿಂದಲೇ ಉತ್ತರ ದೊರೆಯಲಾರದು. ಜನನ ಮರಣಗಳ ಜಟಿಲ ಸಮಸ್ಯೆಯು ಬಗೆಹರಿಯಲಾರದು. ಎರಡು ವ್ಯಕ್ತಿಗಳಿಂದ ಬರುವ ಎರಡು ಪ್ರಶ್ನೆಗಳು ಎಲ್ಲರ ಕುತೂಹಲವನ್ನು ಕೆರಳಿಸುತ್ತವೆ. ಆಗತಾನೆ ಹುಟ್ಟಿರುವ ಮಗುವಿನ ಬಾಯಿಂದ ಬರುವ ಪ್ರಶ್ನೆ ನಾನು ಯಾರು? "ಎಲ್ಲಿಂದ ಬಂದೆ"? ಮರಣೋನ್ಮುಖನಾಗಿರತಕ್ಕ ವ್ಯಕ್ತಿಯ ಬಾಯಿಂದ ಬರುವ ಪ್ರಶ್ನೆ "ಎಲ್ಲಿಗೆ ಹೋಗುವುದು"? ಈ ಬಗ್ಗೆ ನಚಿಕೇತನು ಈ ಕುತೂಹಲಕಾರಕವಾದ ಪ್ರಶ್ನೆಗಳನ್ನು ಯಮಧರ್ಮರಾಯನ ಮುಂದೆ ಇಟ್ಟು ಯೋಗ್ಯ ಉತ್ತರ ಪಡೆಯಲು ಪ್ರಯತ್ನಪಟ್ಟಿದ್ದಾನೆ. ಜಗತ್ತಿನಲ್ಲಿ ಅಲಭ್ಯವಾದ ಸುಖ ಸಂಪತ್ತುಗಳೆಲ್ಲವನ್ನು ಪಡೆದು ಸಂಶಯವನ್ನು ಪರಿಹರಿಸಿಕೊಳ್ಳುವುದೇ ಅತ್ಯಂತ ಶ್ರೇಯಸ್ಕರವೆಂದು ಪ್ರಾರ್ಥಿಸುತ್ತಾನೆ.

ಈ ಸಮಸ್ಯೆಗೆ ಉತ್ತರವನ್ನು ಹುಡುಕಲು ಯತ್ನಿಸುತ್ತಾ ಅಂತರ್ಮುಖಿಯಾಗಿ ಚಿಂತನೆಮಾಡುತ್ತಾ ದೇಹ ಪ್ರಾಣಗಳಿಗಿಂತ ಬೇರೆಯಾದ ನಿತ್ಯವಾದ, ಶಾಶ್ವತವಾದ ಚಿಚ್ಛಕ್ತಿಯೊಂದು ಇರುವುದಾಗಿಯೂ, ಅದೇ ಆತ್ಮನೆಂದು ಕರೆಯಲ್ಪಡುತ್ತಿರುವುದಾಗಿಯೂ, ಇದುವೇ ಸತ್ಯಶುದ್ಧ ಚೈತನ್ಯವಾಗಿ ದೇಹ ಪ್ರಾಣಗಳು ಇದರಿಂದಲೇ ಚೇತನಹೊಂದಿ ಇವರ ವಿಕಾಸಕ್ಕಾಗಿ ಕೇವಲ ನಿಮಿತ್ತಮಾತ್ರವಾಗಿರತಕ್ಕ ವಸ್ತುಗಳೆಂದು ಅರ್ಥಮಾಡಿಕೊಂಡನು ಹೊರಗಿನ ಯಾವುದೇ ವಸ್ತುಗಳಿಂದ, ಶಕ್ತಿಗಳಿಂದ ಕೊಂಚವಾದರೂ ವಿಕಾಸ ಹೊಂದದ ಶುದ್ಧ ಚೈತನ್ಯವದು. ಭಗವದ್ಗೀತೆಯಲ್ಲಿ ಆತ್ಮವಿಚಾರವನ್ನು ಪ್ರಸ್ತಾಪಮಾಡುತ್ತಾ ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ನಚೈನಂ ಕ್ಲೇದಯಂತ್ಯಾಪೋನ ಶೋಷಯತಿ ಮಾರುತಃ ॥ ಎಂಬುದಾಗಿ ಹೇಳಿದೆ.

# 'ಸಿದ್ಧಗಂಗಾ'

ಮೇ ೧ ೧೯೮೦

ಸಂಪುಟ-೧೭ ಸಂಚಿಕೆ-೫

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ
ಪಂ|| ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ಆಜೀವ ಸದಸ್ಯತ್ವ: **151-00** ರೂ
ವಾರ್ಷಿಕ ಚಂದಾ: **10-00** ರೂ


## ಈ ಸಂಚಿಕೆಯಲ್ಲಿ



### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೇಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"
"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]
ಗಂಗ ಕ್ಷೇತ್ರ-572104 ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1980ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು
'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ-572104 ತುಮಕೂರು ಜಿಲ್ಲೆ.

# ಸಂಪಾದಕೀಯ

ಕಾರಣಗಳೇನೇ ಇರಲಿ, ಆಕಸ್ಮಿಕ ದುರ್ಘಟನೆಗಳು ಒದಗಿ ಬಂದೇ ಬರುತ್ತವೆ. ದೇಶ ಕಾಲ ನಿಯಮಗಳನ್ನು ಮೀರಿ ಬರುವುದೇ ಅದರ ಲಕ್ಷಣ. ಪರಿಣಾಮ ವ್ಯಕ್ತಿಯ ಮೇಲೆಂತೋ ಅಂತೆಯೇ ರಾಷ್ಟ್ರದ ಮೇಲೂ ಅಪಾರ. ಇತ್ತೀಚೆಗೆ ಇಂಥದು ಘಟನೆಗೊಳಗಾದವರಲ್ಲಿ ಸಂಜಯ್‌ಗಾಂಧೀ, ಡಾ|| ವಿ.ವಿ. ಗಿರಿ, ಮತ್ತು ಯಶೋಧರ ದಾಸಪ್ಪ ಮುಖ್ಯರು.

23-6-80 ರಂದು ಅಕಾಲದಾರುಣ ಮರಣಕ್ಕೀಡಾದ ಸಂಜಯ್, ಪ್ರಧಾನಿ ಇಂದಿರಾಗಾಂಧಿಯವರ ದ್ವಿತೀಯ ಪುತ್ರ. ಭಾರತೀಯ ರಾಜಕೀಯದಿಗಂತದಲ್ಲಿ ದಿಢೀರ್ ಎದ್ದು ನಿಂತ ಶಕ್ತಿ, ಅಷ್ಟೇ ವಿವಾದಾಸ್ಪದವೂ, ಉಲ್ಕಾಪಾತದಂತೆ ಮಿಂಚಿ ಮರೆಯಾದ ನತದ್ರಷ್ಟ. ಯುವನಾಯಕ ಸಂಜಯ್‌ಗೆ ಪ್ರತಿದಿನ ಬೆಳಿಗ್ಗೆ ವಿಮಾನ ವಿಹಾರದ ಅಭ್ಯಾಸ ಅದರಂತೆ ಅಂದು ಹಾರಾಟಕ್ಕಾಗಿ ಪಿಟ್ಸ್ ವಿಮಾನದಲ್ಲಿ ವೈಮಾನಿಕ ಕಸರತ್ತು ಪ್ರಾರಂಭ. ಹನ್ನೆರಡೇ ನಿಮಿಷದಲ್ಲಿ ಧಿಡೀರ್ ಅಪಘಾತಕ್ಕೆ ಗುರಿ. ಎಲ್ಲೆಡೆ ಬರಸಿಡಿಲಿನಂತೆ ಸುದ್ಧಿ.

14-12-46 ರಲ್ಲಿ ಸಂಜಯ್‌ಗಾಂಧಿಯ ಜನನ. ಬದುಕಿದ್ದು ಕೇವಲ 33ವರ್ಷ ಮಾತ್ರ. ಡೆಹೊರಾಡೂನ್ ಶಾಲೆಯಲ್ಲಿ ಶಿಕ್ಷಣ ಪ್ರಾರಂಭ, ನಂತರ ಬ್ರಿಟನ್ನಿನ ರೋಲ್ಸ್‌ರಾಯ್ಸ್ ಕಂಪನಿಯಲ್ಲಿ ಆಟೋ ಎಂಜನಿಯರಿಂಗ್ ಅಪರೆಂಟಿಸ್ ತೇರ್ಗಡೆ 1966 ರಲ್ಲಿ ಸ್ವದೇಶಕ್ಕೆ ವಾಪಾಸ್; ಮುಂದೆ ದೆಹಲಿ ಗ್ಯಾರೇಜೊಂದರಲ್ಲಿ ಟ್ರೈನಿಂಗ್. ಆಮೇಲೆ ಮಾರುತಿ ಸಣ್ಣಕಾರಿನ ಯೋಜನೆ; 1963 ರಲ್ಲಿ ಮೇನಕಾರೊಡನೆ ವಿವಾಹ; 1979 ರಲ್ಲಿ ಅತ್ಯಂತ ಪ್ರಭಾವ; ಕಳೆದ ಜನವರಿಯಲ್ಲಿ ಅಮೇಥಿ ಕ್ಷೇತ್ರದಿಂದ ಪ್ರಚಂಡ ವಿಜಯದೊಂದಿಗೆ ಆಯ್ಕೆ. ಕೊನೆಯದಾಗಿ ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿ - ಇವು ಸಂಜಯ್ ಇಟ್ಟ ದಿಟ್ಟ ಹೆಜ್ಜೆಗಳು. ಇಂಥ ಧೀರನನ್ನು ಹೆತ್ತ ವೀರ ಮಾತೆ ಶ್ರೀಮತಿ ಗಾಂಧಿಯವರ ಮನಸ್ಸಿಗೆ ಶಾಂತಿ ಹಾಗೂ ದಿವಂಗತರ ಆತ್ಮಕ್ಕೆ ಶಾಂತಿ ದೊರಕಲೆಂದು ಸಿದ್ಧಗಂಗಾ ಆಶಿಸುತ್ತದೆ.

ಇನ್ನೂ ಸಂಜಯ್ ಮರಣದ ದುಃಖದಲ್ಲಿ ಮುಳುಗಿರುವಾಗಲೇ, ಗಾಯದ ಮೇಲೆ ಬರೆಎಳೆದಂತೆ 24-6-80 ರಂದು ಡಾ|| ವಿ. ವಿ. ಗಿರಿಯವರ ಮರಣದ ದುಃಖ ವಾರ್ತೆ ಬಂದೆರಗಿತು. ವರಾಹಗಿರಿ ವೆಂಕಟಗಿರಿಯವರದು ಸದಾ ಚಟುವಟಿಕೆ ಮತ್ತು ಧ್ಯೇಯವಾದಿತ್ವದ ವ್ಯಕ್ತಿತ್ವ ಬಾಲ್ಯದಿಂದಲೂ ಬಡಜನರ ಮತ್ತು ಕಾರ್ಮಿಕರ ಸಮಸ್ಯೆಗಳಲ್ಲಿ ವಿಶೇಷವಾದ ಆಸಕ್ತಿ; 60 ವರ್ಷಗಳಕಾಲ ರಾಜಕೀಯ ರಿಜ್ಞಕ್ಕೆ ತಮ್ಮತನದ ಅರ್ಪಣೆ; ಶ್ರೀ ರಾಜಗೋಪಾಲಾಚಾರ್ಯರ ಶಾಸನ ಪದ್ಧತಿ ಸರ್ಕಾರದಲ್ಲೆ ಮಂತ್ರಿಪದವಿ 1952 ರಲ್ಲಿ ಪ್ರಥಮ ಚುನಾವಣೆಯ ನಂತರ ನೆಹ್ರೂ ಮಂತ್ರಿಮಂಡಲದಲ್ಲಿ ಕಾರ್ಮಿಕ ಮಂತ್ರಿಪದವಿ ಸ್ವೀಕಾರ; ಆಗ ಕಾರ್ಮಿಕ ಶಾಸನದ ವಿಷಯದಲ್ಲಿ ನೆಹ್ರೂರವರೊಡನೆ ಭಿನ್ನಾಭಿಪ್ರಾಯ ಬಂದಾಗ ಮಂತ್ರಿಪದವಿಗೆ ರಾಜೀನಾಮೆ; ಮುಂದೆ ಮತ್ತೆ ರಾಜಕೀಯ ಪ್ರವೇಶ; ನಾನಾ ಪ್ರಾಂತಗಳಲ್ಲಿ ರಾಜ್ಯಪಾಲರ ಹುದ್ದೆ; ಉಪರಾಷ್ಟ್ರಪತಿ, 1969 ರಲ್ಲಿ ಡಾ|| ಜಾಕೀರ್‌ಹುಸೇನ್ ನಂತರ ರಾಷ್ಟ್ರಪತಿ ಪದವಿ; ಆಗ 75ರ ಇಳಿವಯಸ್ಸು; ಆದರೂ ಅಮಿತ ಉತ್ಸಾಹ-ಇದು ಡಾ|| ವಿ ವಿ. ಗಿರಿಯವರ ಸಾರ್ಥಕ ಹಿನ್ನೋಟ.

ಶ್ರೀ ಗಿರಿಯವರಿಗೂ ಕರ್ನಾಟಕಕ್ಕೂ ಒಂದು ವಿಶೇಷ ಬಾಂಧವ್ಯವಿತ್ತು-ಈ ಮಾತನ್ನು ಅವರೇ ಹೇಳಿಕೊಳ್ಳುತ್ತಿದ್ದರಂತೆ. ಅದಕ್ಕೆ ಕಾರಣ : ಹಿಂದೊಮ್ಮೆ ರಾಜಕಾರಣಕ್ಕಾಗಿ ಬಂದಾಗ ಅವರ ತಂದೆಯವರು ಮೈಸೂರಿನಲ್ಲಿ ತೀರಿಕೊಂಡರಂತೆ. ಅವರ ಸಂಸ್ಕಾರವಾದುದು ಮೈಸೂರಿನಲ್ಲಿಯೇ. ಮತ್ತೆ ರಾಜ್ಯಪಾಲರಾಗಿಯೂ ಬಂದರು. ಒಟ್ಟಿನಲ್ಲಿ

ತುಂಬು ಬಾಳನ್ನು ಬಾಳಿದ ಡಾ॥ ವಿ. ವಿ. ಗಿರಿಯವರ ನಿಧನದಿಂದುಂಟಾಗಿರುವ ನಷ್ಟ ಅಪಾರ. ಮೃತರ ಆತ್ಮಕ್ಕೆ ಚಿರಶಾಂತಿ ದೊರಕಲೆಂದು ಸಿದ್ಧಗಂಗಾ ಆಶಿಸುತ್ತದೆ.

ಅಪ್ಪಟ ಗಾಂಧಿವಾದಿಗಳಾಗಿ ರಾಜ್ಯದ ಮಾಜಿಸಚಿವೆಯಾಗಿ ಸಾರ್ಥಕ ಸೇವೆಯನ್ನು ಸಲ್ಲಿಸಿ ದಿವಂಗತರಾದ ಯಶೋದರಾದಾಸಪ್ಪನವರ ಆತ್ಮಕ್ಕೆ ಪರಮಾತ್ಮನು ನೆಮ್ಮದಿಯನ್ನುಂಟುಮಾಡಬೇಕೆಂದು ಸಿದ್ಧಗಂಗಾ ಬಯಸುತ್ತದೆ.

ಅಶ್ಮಾಪಿ ಯಾತಿ ದೇವತ್ವಂ ಮಹದ್ಭಿಃ ಸುಪ್ರತಿಷ್ಠಿತಃ –

ಮಹಾತ್ಮರಿಂದ ಸಂಸ್ಥಾಪಿಸಲ್ಪಟ್ಟ ಕಲ್ಲೂ ಕೂಡ ದೇವತ್ವವನ್ನು ಪಡೆಯುತ್ತದೆ. ಅಂದಮೇಲೆ ಮಹಾತ್ಮರ ಹಸ್ತಸ್ಪರ್ಷಕ್ಕೆ ಮಿಗಿಲೆಣೆಯುಂಟೆ. ಆ ಮಹಾತ್ಮರ ಅದ್ವಿತೀಯ ಲಿಂಗ ತಪಸ್ಸು, ಸಂಕಲ್ಪ ಸಿದ್ಧಿಯನ್ನು ತಂದು ಕೊಡುತ್ತದೆ. ಅವರು ನಿಂತ ನೆಲ ಪವಿತ್ರ. ನುಡಿದ ಮಾತು ಮಂತ್ರ. ಕೊಟ್ಟ ಅಭಯ ವಚನ ವರ. ಅವರೆ ಅಂತಃಕರಣ ಸ್ಫೂರ್ತಿಯ ಚಿಲುಮೆ.

"ಸತಾಂ ಹಿ ಸಂದೇಹ ಪದೇಷು ವಸ್ತುಷು ಪ್ರಮಾಣಮಂತಃಕರಣ ಪ್ರವೃತ್ತಯಃ"

ಎಂಬಂತೆ ತಮ್ಮ ಅಂತಃಕರಣ ಸಾಕ್ಷಿಯಾಗಿ ನಿರ್ಣಯಿಸಿ, ತಮ್ಮನ್ನು ಸೇವಾಕ್ಷೇತ್ರದಲ್ಲಿ ಲೀನಗೊಳಿಸಿ ಕೊಳ್ಳುತ್ತಾರೆ. ಅವರ ಅಂತಃಕರುಣಾ ಕಟಾಕ್ಷ ತುಂಬಿ ಕೋಡಿಹರಿದು ನಾಡನ್ನು ಪುನೀತಗೊಳಿಸುತ್ತದೆ. ಇದರಿಂದ ಇಡೀ ಜಗತ್ತು ಚೇತನಗೊಳ್ಳುತ್ತದೆ. ಎಣ್ಣೆ ಬತ್ತಿಗಳು ತಾವು ಉರಿದು ಲೋಕಕ್ಕೆ ಬೆಳಕು ಕೊಡುವಂತೆ, ತಮ್ಮ ತನುಮನಗಳನ್ನು ಬಳಲಿಸಿ ಲೋಕವನ್ನು ಬೆಳಗಿಸುತ್ತಾರೆ. ಈ ಜಡ ಜಗತ್ತನ್ನು ಚೈತನ್ಯಗೊಳಿಸುತ್ತಾರೆ. ಅವರ ಬದುಕೇ ಲೋಕಕ್ಕೆ ಉಪದೇಶ. ಇಂತಹ ಚೈತನ್ಯ ಶಕ್ತಿಯನ್ನು ನೆನೆದಾಗ ಸುಪ್ರಸಿದ್ಧ ತ್ರಿವಿಧ ದಾಸೋಹ ಕ್ಷೇತ್ರ ಶ್ರೀ ಸಿದ್ಧಗಂಗಾ ಕ್ಷೇತ್ರದ ಗುರುಪರಂಪರೆಯ ವಿಶ್ವಭ್ರಾತೃತ್ವ ಪ್ರೇಮವು ಸ್ಮರಣೆಗೆ ಬರುತ್ತದೆ ಎಂದರೆ ಅತಿಶಯೋಕ್ತಿಯಲ್ಲ.

ಶ್ರೀ ಸಿದ್ಧಗಂಗಾ ಕ್ಷೇತ್ರವು ಬಹು ಪ್ರಾಚೀನಕಾಲದ ಪವಿತ್ರ ಪುಣ್ಯಕ್ಷೇತ್ರ. ಸುಮಾರು ಹನ್ನೆರಡನೆಯ ಶತಮಾನದಿಂದಲೂ ಅನೇಕ ಶರಣ ಸಂತರು, ಸಿದ್ಧರು ಅನುಷ್ಠಾನ ಗೈದು ಸಿದ್ಧಿಪಡೆದ ಸಿದ್ಧ ಕ್ಷೇತ್ರ ಇದು. ಗುರು ಗೋಸಲ ಸಿದ್ಧೇಶ್ವರರಿಂದ ಹಿಡಿದು, ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರವರೆವಿಗೂ ಶ್ರೀ ಕ್ಷೇತ್ರದ ತಪೋಧಾರೆ ಅವಿಚ್ಛಿನ್ನವಾಗಿ ಹರಿದು ಬಂದಿದೆ. ಶ್ರೀ ಶ್ರೀ ಗಳವರು ತಮ್ಮ ಗುರು ಶ್ರೀ ಶ್ರೀ ಉದ್ದಾನ ಶಿವಯೋಗಿಗಳಿಂದ ತಾರೀಖು 3-3-1930 ರಂದು ಸ್ವೀಕರಿಸಿದ ವಿರಕ್ತಾಶ್ರಮದ ದಿನದಂದೇ ಸಾರ್ವಜನಿಕ ಸೇವಾಕ್ಷೇತ್ರದ ಸೇವಾದೀಕ್ಷೆಯನ್ನೂ ಸ್ವೀಕರಿಸಿದರು. ಅಂದಿನಿಂದ ನಿರಂತರ ಸೇವೆಯಲ್ಲಿ ತಮ್ಮನ್ನು ಮುಡುಪುಮಾಡಿಕೊಂಡರು. ತಮ್ಮ ಪರಿಶುದ್ಧ ಹೋರಾಟದ ಪುಣ್ಯಫಲವನ್ನು ಸರ್ವ ಸಮಾಜ ಬಾಂಧವರೂ ಉಂಡು ಆನಂದಿಸಿದರು. ಶ್ರೀ ಶ್ರೀ ಗಳವರ ಕಾರ್ಯ ಬಾಹುಳ್ಯ ಅನಂತವಾದುದು, ಬಹುಮುಖವಾದದ್ದು. ಸರ್ವಸಮಾಜವನ್ನು ಸರ್ವಾಂಗೀಣ ಅಭಿವೃದ್ಧಿಯತ್ತ ಸಾಗಿಸಿ, ಮನುಷ್ಯ ಮನುಷ್ಯನಾಗಿ ಬಾಳುವ ಕಲೆಯನ್ನು ಕಲಿಸಲು ಸರ್ವವಿಧವಾದ ಪ್ರಯತ್ನವನ್ನು ಮಾಡುತ್ತಾ ಬಂದರು. ಈ ಸೇವಾಕಾರ್ಯದಿಂದ ಐವತ್ತು ಸಂವತ್ಸರಗಳು ಸಾರ್ಥಕತೆಯನ್ನು ಪಡೆದವು. ಆ ಕುರುಹಾಗಿ ಈ 80ನೆಯ ಇಸ್ವಿಯಲ್ಲಿ ಸುವರ್ಣ ಮಹೋತ್ಸವವನ್ನು ಆಚರಿಸುವ ಸಿದ್ಧತೆ ಬರದಿಂದ ಸಾಗಿದೆ. ಎಲ್ಲ ಭಕ್ತಮಹಾಶಯರೂ ಶ್ರೀ ಕ್ಷೇತ್ರದ ಅಪಾರ ಹಳೆಯ ವಿದ್ಯಾರ್ಥಿ ಮಿತ್ರರು ಈ ಮಹೋತ್ಸವವನ್ನು ಆಚರಿಸುತ್ತಿರುವುದು ಕೃತಜ್ಞತೆಯ ದ್ಯೋತಕವಾಗಿದೆ. ಇದೇ ಸಂದರ್ಭದಲ್ಲಿ ಶ್ರೀ ಶ್ರೀ ಗಳವರು ಶ್ರೀ ಕ್ಷೇತ್ರ ಉಚಿತ ವಿದ್ಯಾರ್ಥಿನಿಲಯ ಮತ್ತು ಸಂಸ್ಕೃತ ಕಾಲೇಜಿನ ವಜ್ರಮಹೋತ್ಸವವನ್ನು ಆಚರಿಸುತ್ತಿರುವುದು ಅವರ ಸಂಕಲ್ಪ ಸಿದ್ಧಿಯ ಹಿರಿಯ ಸಾಕ್ಷಿಯಾಗಿದೆ. ಈ ಮಹಾ ಕಾರ್ಯಗಳನ್ನು ಒಂದು ವ್ಯವಸ್ಥಿತ ಕ್ರಮದಲ್ಲಿ ನೆರವೇರಿಸಲು ಯೋಜಿತ ಪೂರ್ವ ಸಿದ್ಧತೆಗಾಗಿ ರಾಜ್ಯ ಮಟ್ಟದ ಸ್ವಾಗತಸಮಿತಿಯನ್ನು ತಾರೀಖು 6-7-80ರಂದು ರಚಿಸಲಾಯಿತು. ಈ ಪೂರ್ವ ಸಿದ್ಧತಾ ಸಮಾರಂಭದ ಅಧ್ಯಕ್ಷತೆಯನ್ನು ನಮ್ಮ ರಾಜ್ಯದ ಶಿಕ್ಷಣ ಸಚಿವರು ವಹಿಸಿದುದು ಶುಭ ಸೂಚಕ ಹಾಗೂ ಔಚಿತ್ಯಪೂರ್ಣ. ಈ ಸಮಾರಂಭದ ಸಂಪೂರ್ಣ ಯಶಸ್ವಿಗೆ ನಾವೆಲ್ಲರೂ ಪಾಲ್ಗೊಂಡು ಆಚರಿಸುವ ಸದಾವಕಾಶವನ್ನು ಕಲ್ಪಿಸಲೆಂದು ಭಗವಂತನನ್ನು ಪ್ರಾರ್ಥಿಸೋಣ.



## ನ ವ ನೀ ತ

1. ಯಶ್ಚದಿಷ್ಟಪರೋ ಲೋಕೇ ಯಶ್ಚಾಪಿ ಹಠವಾದಿಕಃ ।
ಉಭಾವಪಿ ಶಠಾವೇತೌ ಕರ್ಮಬುದ್ಧಿಃ ಪ್ರಶಸ್ಯತೇ ॥

ಲೋಕದಲ್ಲಿ ಯಾವನು ಕೇವಲ ದೈವವನ್ನೇ ನಂಬಿರುವನೊ ಮತ್ತು ಯಾವನು ಕೇವಲ ಪೌರುಷವನ್ನೇ ನಂಬಿ ಹಠವಾದಿಯಾಗಿರುವನೋ ಆ ಇಬ್ಬರೂ ಮೂರ್ಖರೇ ಸರಿ. ಈ ಎರಡೂ ಕರ್ತವ್ಯವೆಂದು ಕಾರ್ಯತತ್ಪರನಾದವನು ಪ್ರಶಂಸಾರ್ಹನು.

—ಮಹಾಭಾರತ.

○ ○ ○

2. ನಿರ್ಧನತ್ವಮಸತ್ಯತ್ವಂ ವಿದ್ಯಾಯುಕ್ತಸ್ಯ ಕರ್ಹಿಚಿತ್ ।
ಅಸ್ಥಾನಿತ್ವಮಭಾಗ್ಯತ್ವಂ ನ ಸುಶೀಲಸ್ಯ ಕರ್ಹಿಚಿತ್ ॥

ವಿದ್ಯಾವಂತನು ಕೆಲವುವೇಳೆ ಬಡವನಾಗಬಹುದು, ಅಸತ್ಯವಾದಿಯಾಗಬಹುದು. ಆದರೆ ಒಳ್ಳೆಯ ಸ್ವಭಾವದವನಿಗೆ ಉತ್ತಮ ಸ್ಥಾನವಾಗಲಿ, ಭಾಗ್ಯವಾಗಲಿ ಸಿಗದೇ ಇರುವುದಿಲ್ಲ.

—ಬೃಹತ್ ಪರಾಶರ ಸ್ಮೃತಿ.

❀ ❀ ❀

3. ಕೀಟೋಽಪಿ ಸುಮನಃ ಸಂಗಾದಾರೋಹತಿ ಸತಾಂ ಶಿರಃ ।
ಅಶ್ಮಾಪಿ ಯಾತಿ ದೇವತ್ವಂ ಮಹದ್ಭಿಃ ಸುಪ್ರತಿಷ್ಠಿತಃ ॥

ಹೂವಿನ ಸಹವಾಸದಿಂದ ಹುಳುವೂಕೂಡ ಸಜ್ಜನರ ಶಿರವನ್ನೇರುತ್ತದೆ. ಮಹಾತ್ಮರು ಪ್ರತಿಷ್ಠೆಮಾಡಿದ ಶಿಲೆಯೂ ಸಹ ದೇವತ್ವವನ್ನು ಹೊಂದುತ್ತದೆ.

—ಹಿತೋಪದೇಶ.

* * *

## ಅಮೃತ ಬಿಂದು

"ಶರೀರವಿರುವತನಕ ಅರಿತವರ ಸಂಘವನು" ಎಂಬುದು ಒಬ್ಬ ಸಂತರ ಅನುಭವದ ಮಾತು. ವ್ಯಕ್ತಿ ಉನ್ನತವಾದ ವ್ಯಕ್ತಿತ್ವವನ್ನು ಸಂಪಾದಿಸಿಕೊಂಡು ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸಬೇಕಾದರೆ ಉತ್ತಮವಾದ ಸಹವಾಸ ಮುಖ್ಯ. ನೆರೆಯವರ ಸಂಸ್ಕಾರ, ಜೀವನ ಉತ್ತಮವಾಗಿರಬೇಕು ನೆರೆ–ಹೊರೆಯಾಗಬಾರದು ಸತ್ ಸಹವಾಸ ಮಾನವನ ಪರಿಪೂರ್ಣತೆಗೆ ಸಹಕಾರಿಯಾಗುತ್ತದೆ. ದುಷ್ಟರ ಸಹವಾಸ ನಿರಂತರ ದುಃಖಕ್ಕೆ ದಾರಿ ಮಾಡಿಕೊಡುತ್ತದೆ. ಜೀವನ ಶಾಂತಿ, ಸುಖಮಯವನ್ನಾಗಿಮಾಡುವುದು. ಅರಿತವರ, ಬಲ್ಲವರ, ತಿಳುವಳಿಕೆಯುಳ್ಳವರ ಸಹವಾಸ ಬೇಕು. ಬಡತನದ ಬವಣೆಯಾದರೂ ಉತ್ತಮ ಸಹವಾಸ ವ್ಯಕ್ತಿತ್ವ ವಿಕಾಸಕ್ಕೆ ಉಪಕಾರಿಯಾಗುತ್ತದೆ. ಬದುಕು, ಉಜ್ವಲವಾಗುತ್ತದೆ. ಸಜ್ಜನರ ಸಹವಾಸ ಹೆಜ್ಜೇನು ಸವಿದಂತೆ ಎನ್ನುತ್ತಾರೆ ಅಣ್ಣಬಸವಣ್ಣನವರು. ಶ್ರೀ ಶಂಕರಾಚಾರ್ಯರು ಸತ್‌ಸಹವಾಸದಿಂದ ಜೀವನ್ಮುಕ್ತಿ ದೊರಕುತ್ತದೆ ಎನ್ನುತ್ತಾರೆ. ಈ ಮಾತನ್ನು ಎಲ್ಲ ಸಂತರು ಅಪ್ಪಣೆ ಕೊಡಿಸಿದ್ದಾರೆ. ವ್ಯಕ್ತಿ ತನ್ನ ವ್ಯಕ್ತಿತ್ವದ ಪರಿಪೂರ್ಣತೆಯನ್ನು ಬಯಸುವುದಾದರೆ ತನ್ನ ಜೀವಿತದ ಕೊನೆಯವರೆವಿಗೂ ಜ್ಞಾನಿಗಳ ಸಹವಾಸ ಬಿಡಬಾರದು.

—ದುಂಬಿ

# ಗ್ರಾಮಾಂತರ ಬಸವಜಯಂತ್ಯುತ್ಸವದ

—ಒಂದು ವರದಿ

—ಕೆ. ಬಸವರಾಜು

ಇಂದು ಹಳ್ಳಿಗಳ ಬದುಕು ಹದಗೆಟ್ಟಿದೆ. ಪರಸ್ಪರ ದ್ವೇಷಾಸೂಯೆ, ಕಚ್ಚಾಟ ತಿಕ್ಕಾಟಗಳ ವಾತಾವರಣ ಬೆಳೆದು ನಿಂತಿದೆ. ಈ ದುಸ್ಥಿತಿ ಮಾಯವಾಗಿ, ಗ್ರಾಮಾಂತರ ಪ್ರದೇಶದಲ್ಲಿ ಒಳ್ಳೆಯ ವಾತಾವರಣ ಮೂಡಿಬರಬೇಕು. ನಮ್ಮ ಹಳ್ಳಿಗಳು ಒಮ್ಮುಖವಾಗಿ ಬೆಳೆಯಬೇಕು. ಸುಖ ಶಾಂತಿ ಕಾಣಬೇಕು. ಜನತೆಯಲ್ಲಿ ಧರ್ಮಜಾಗೃತಿಯುಂಟಾಗಬೇಕು. ನಮ್ಮ ಭವ್ಯ ಸಂಸ್ಕೃತಿ ಕಲೆ, ಧರ್ಮ, ದೇವರು, ಕಾಯಕತತ್ವ, ಸೋದರತೆ, ಸಮಾನತೆ, ಸೌಹಾರ್ದತೆ, ಸಹಬಾಳ್ವೆ – ಮೊದಲಾದ ಬದುಕಿನ ಮೌಲ್ಯಗಳ ಅರಿವು ಜನತೆಗುಂಟಾಗಬೇಕು ಇವೇ ಮುಂತಾದ ಮಹತ್ವದ ಉದ್ದೇಶಗಳನ್ನಿಟ್ಟುಕೊಂಡು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು "ಗ್ರಾಮಾಂತರ ಬಸವಜಯಂತ್ಯುತ್ಸವ"ದ ಯೋಜನೆಯನ್ನು ರೂಪಿಸಿಕೊಂಡರು. ಹತ್ತಿಪ್ಪತ್ತು ವರ್ಷಗಳ ಹಿಂದೆಯೇ ( ಸು. 1956 ರಲ್ಲಿ ) ರೂಪುಗೊಂಡ ಈ ಯೋಜನೆ ಕಳೆದ ಸಂವತ್ಸರದಿಂದ ಪುನಶ್ಚೇತನಗೊಂಡಿತು ಈ ಯೋಜನೆಯನ್ವಯ ತಾಲ್ಲೂಕಿಗೆ ಒಂದೆರಡು ಹಳ್ಳಿಗಳಂತೆ ಹಾಯ್ದುಕೊಂಡು ಅಲ್ಲಿನ ಸಮಸ್ತವರ್ಗದ ಬಾಂಧವರ ಸಹಕಾರದಿಂದ ಕಾರ್ಯಕ್ರಮಗಳನ್ನು ವ್ಯವಸ್ಥೆ ಮಾಡಲಾಯಿತು. ಕಾರ್ಯಕ್ರಮದ ದಿನದಂದು ಬೆಳಿಗ್ಗೆ ಮತ್ತು ಸಾಯಿಂಕಾಲ ಎರಡು ಅವಧಿಗಳೂ ಘನವಿದ್ವಾಂಸರುಗಳಿಂದ ಬಸವಣ್ಣನವರ ಜೀವನ, ಕಾಯಕತತ್ವ ಸಮತಾವಾದ-ಮುಂತಾದ ತತ್ವಗಳನ್ನು ಕುರಿತು ಉಪನ್ಯಾಸ; ಕೊನೆಯಲ್ಲಿ ಶ್ರೀ ಶ್ರೀಗಳವರ ಅನುಗ್ರಹ ಭಾಷಣ ಮಧ್ಯಾಹ್ನ ನೆರೆದ ಜನಸ್ತೋಮಕ್ಕೆಲ್ಲ ದಾಸೋಹದ ವ್ಯವಸ್ಥೆ; ರಾತ್ರಿ ಶ್ರೀ ಸಿದ್ಧಲಿಂಗೇಶ್ವರ ಕಲಾವೃಂದದವರಿಂದ ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕ ಕಾರ್ಯಕ್ರಮವನ್ನು ರೂಪಿಸಲಾಗಿತ್ತು. ನಾಟಕದಿಂದ ತತ್ವಗಳು ಸುಲಭವಾಗಿ ಗ್ರಾಹ್ಯವಾಗುತ್ತವೆ, ಮತ್ತು ಚಳಿಯಿರಲಿ, ಮಳೆಯಿರಲಿ, ಶ್ರೀ ಶ್ರೀಗಳವರು ದಿನವಿಡೀ ಜನರ ಜೊತೆಯಲ್ಲಿ ಉಪಸ್ಥಿತರಿರುತ್ತಿದ್ದುದು ಕಾರ್ಯಕ್ರಮದ ವಿಶೇಷವಾಗಿರುತ್ತಿತ್ತು.

ಆ ಪ್ರಕಾರ ಈ ವರ್ಷ ದಿನಾಂಕ14–4-80 ರಂದು ನೆಲಮಂಗಲಾ ತಾ॥ ದಾಸೇನಹಳ್ಳಿಯಲ್ಲಿಯೂ, ದಿ. 17-4-80 ರಂದು ಮಾಗಡಿ ತಾ॥ ನಾಗಶೆಟ್ಟಿಹಳ್ಳಿಯಲ್ಲಿಯೂ; ತಾ॥ 16-5-80 ರಂದು ದೊಡ್ಡಬಳ್ಳಾಪುರ ತಾ॥ ದೊಡ್ಡಹೆಜ್ಜಾಜಿಯಲ್ಲಿಯೂ; ತಾ॥ 23-4-80ರಂದು ನೆಲಮಂಗಲದ ಶ್ರೀ ಬಸವಣ್ಣದೇವರ ಮಠದಲ್ಲಿಯೂ, ದಿನಾಂಕ. 28-4-80 ರಂದು ಹಾಸನ ಜಿಲ್ಲಾ ಆಲೂರು ತಾ॥ ಸಂಕಲಾಪುರದಲ್ಲಿಯೂ, ದಿನಾಂಕ 1-5-80 ರಂದು ತುಮಕೂರು ತಾ॥ ಮಾವಿನಕೆರೆ ಗ್ರಾಮದಲ್ಲಿಯೂ, ದಿನಾಂಕ. 19-5-80ರಂದು ತುಮಕೂರು ತಾ॥ ಕಾಗ್ಗೆರೆ ಗ್ರಾಮದಲ್ಲಿಯೂ ಮತ್ತು ಕೊನೆಯದಾಗಿ ತಾ॥ 31-5-80 ರಂದು ನೆಲಮಂಗಲ ತಾ॥ ಕಡಬಗೆರೆಯಲ್ಲಿಯೂ ಕಾರ್ಯಕ್ರಮವನ್ನು ಆಚರಿಸಲಾಯಿತು. ಘನವಿದ್ವಾಂಸರುಗಳಾದ ಶ್ರೀ ಪಂಡಿತ ಚನ್ನಪ್ಪ ಎರೇಸೀಮೆ, ಶ್ರೀ ಗೊ.ರು. ಚನ್ನಬಸಪ್ಪ, ಶ್ರೀ ಹಿ.ಚಿ. ಶಾಂತವೀರಯ್ಯ ಶ್ರೀ ಹೆಚ್. ವಿ. ವೀರಭದ್ರಯ್ಯ ಶ್ರೀ ಬಿ.ವಿ. ವೀರಭದ್ರಯ್ಯ ಶ್ರೀ ಸೋಮಶೇಖರ್ ಶ್ರೀ ಕೆ. ಪಿ. ಶಿವಲಿಂಗಯ್ಯ, ಮತ್ತು ಶ್ರೀ ಎನ್.ಎಂ. ಸೋಗಿ ಮುಂತಾದವರು ವಿವಿಧ ಸ್ಥಳಗಳಲ್ಲಿ ಭಾಗವಹಿಸಿ ಬಸವಣ್ಣನವರ ವಿವಿಧತತ್ವಗಳನ್ನು ಕುರಿತು ಭಾಷಣಮಾಡಿದರು. ಅನೇಕ ಹರಗುರುಚರಮೂರ್ತಿಗಳೂ ಉಪಸ್ಥಿತರಿದ್ದು ಸಭೆಗೆ ಶೋಭೆಯನ್ನು ತಂದಿದ್ದರು. ಅನೇಕ ಸ್ಥಳಗಳಲ್ಲಿ ಮಳೆಯಿಂದ ಕಾರ್ಯಕ್ರಮಕ್ಕೆ ಅಡ್ಡಿಬರುವಂತಾದರೂ ಶ್ರೀ ಶ್ರೀಗಳವರ ಮನಸ್ಸಂಕಲ್ಪದಿಂದ ತೊಂದರೆಯೆಲ್ಲವೂ ಹರಿದು ಕಾರ್ಯಕ್ರಮಗಳು ಯಶಸ್ವಿಯಾಗಿ ಜರುಗಿದವು.



(ಮುಂದುವರಿದ ಲೇಖನ)

# ಶ್ರೀ ಸಿದ್ಧಗಂಗಾ ಕ್ಷೇತ್ರ : ಪರಿಸರ ಮತ್ತು ಇತಿಹಾಸ

—ಚನ್ನಪ್ಪ ಎರೇಸೀಮೆ

**12 ನೆಯ ಶತಮಾನದ ಮ್ಲೇಚ್ಛರ ಹಾವಳಿ :-**
**ಹರದನಹಳ್ಳಿ ಪೀಠಾಚಾರ್ಯರಬಾಲ್ಯ ಕಾಂತ್ರಿ :-**

ಕಲ್ಯಾಣದ ಕ್ರಾಂತಿಯ ನಂತರ ಅಸ್ತವ್ಯಸ್ತಗೊಂಡ ಪರಿಸ್ಥಿತಿಯನ್ನು ೧೨ ನೇ ಶತಮಾನದ ಕೊನೆಯಲ್ಲಿ ಸಿದ್ಧಗಂಗಾ ಪರಿಸರದಲ್ಲಿ ಮಾಡಿದ ಸಿದ್ಧಪ್ರಾಯರ ಕ್ರಾಂತಿಯು ಕ್ರಿ.ಶ.ಸು ೧೫೫೦ ರ ವರೆಗೆ ಜನತೆಯನ್ನು ಸುವ್ಯವಸ್ಥಿತ ಸ್ಥಿತಿಗೆ ತರಲು ಪ್ರಯತ್ನಿಸುತ್ತಿತ್ತು. ಆದರೆ ಒಮ್ಮೆಲೆ ಬಿರುಗಾಳಿಯಂತೆ ೧೩ ನೇ ಶತಮಾನದ ಕೊನೆಯಲ್ಲಿ ಅನೇಕ ಅನಿಷ್ಟ ಪರಂಪರೆಗಳು ಕರ್ನಾಟಕದಲ್ಲಿ ಬಂದೊದಗಿದವು. ಇಲ್ಲಿ ಧರ್ಮ ಸಾಹಿತ್ಯ ಸಂಸ್ಕೃತಿ, ಸಂಪತ್ಪೂರಿಗೊಂಡ ಘೋರ ವಿಪತ್ತೊಂದು ಜನತೆ ಅನುಭವಿಸುವ ಹಠಾತ್ತಾದ ಪರಿಸ್ಥಿತಿ ಬಂದೊದಗಿತು. ಒಂದು ಕಾಲದಲ್ಲಿ ಕನ್ನಡನಾಡು ದಕ್ಷಿಣ ಭಾರತವನ್ನು ಸುಸ್ಥಿತಿಯಲ್ಲಿಡುವ ಕರ್ತವ್ಯ ಭಾರವನ್ನು ಹೊತ್ತುನಿಂತನಾಡಾಗಿತ್ತು. ಇಲ್ಲಿ ಹುಟ್ಟಿ ಬೆಳೆದ ಚಕ್ರಾಧಿಪತ್ಯಗಳೇ ಇದಕ್ಕೆ ಸಾಕ್ಷಿ. ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದಷ್ಟು ಚಕ್ರಾಧಿಪತ್ಯಗಳು ಭಾರತದ ಇನ್ನಾವ ಭಾಗದಲ್ಲೂ ಹುಟ್ಟಿಬೆಳೆಯಲಿಲ್ಲವೆಂದರೆ ತಪ್ಪಲ್ಲ. ಮೌರ್ಯರ ಸಾಮಂತರಾಗಿದ್ದ ಶಾತವಾಹನರು ಮತ್ತು ಗಂಗರು ಮೊದಲ್ಗೊಂಡು ಹೊಯ್ಸಳರವರೆಗೆ ಸುಮಾರು ೧೨೦೦ ವರ್ಷಗಳು ದಕ್ಷಿಣ ಭಾರತವು ಜ್ಞಾನ ವಿಜ್ಞಾನಗಳ, ಸಾಹಿತ್ಯ, ಲಲಿತಕಲೆ, ಶಿಲ್ಪ ವಿಜ್ಞಾನಗಳ ತವರು ಮನೆಯೆನಿಸಿತ್ತು. ಚಾಲುಕ್ಯ ಚಕ್ರವರ್ತಿಗಳ ಆಳ್ವಿಕೆನಲ್ಲಿ ವೈಭವ ಶಿಖರಕ್ಕೇರಿದ್ದ ಕನ್ನಡ ಚಕ್ರಾಧಿಪತ್ಯದ ಆಧಾರಸ್ತಂಭಗಳು ಆ ಚಕ್ರಾಧಿಪತ್ಯದ ಅವಸಾನದ ನಂತರ ಲಿಕಿಲಿಕಿಯಾಗಿ ಹೋದವು. ಆಗ ಸಮಗ್ರ ಕರ್ನಾಟಕದ ಕ್ಷೇಮ ಚಿಂತನೆಯ ಇನ್ನೊಂದು ಚಕ್ರಾಧಿಪತ್ಯಗರಿಗಟ್ಟಿ ಕೊಳ್ಳಲಿಲ್ಲ. ಅನೇಕ ಚಿಕ್ಕ ದೊಡ್ಡ ಸ್ವಯುಧಕಲಹ ಪೀಡಿತ ರಾಜ್ಯಗಳು ಮಾತ್ರ ಉಳಿದವು. ಅದುವರೆಗೆ ಉತ್ತರದ ಮಹಮ್ಮದೀಯರ ದಾಳಿಯಿಂದ ದೂರವಿದ್ದ ಕನ್ನಡನಾಡಿಗೆ ಮಹಮ್ಮದೀಯರ ದಾಳಿಯ ಸಿಡುಗು ಪ್ರಾರಂಭವಾಯಿತು. ಸಮರ್ಥವಾಗಿ ಆ ದಾಳಿಯನ್ನು ತಡೆಗಟ್ಟುವ ಕೆಚ್ಚು ನೆಚ್ಚುಗಳು ಕನ್ನಡಿಗರಲ್ಲಿ ಉಳಿಯಲಿಲ್ಲ. ಇದಕ್ಕೆ ಕಾರಣಗಳು ಅನೇಕ. ಅನೈಕಮತ್ಯತುಂಬಿತ್ತು. ಅಂತೆಯೇ ಪ್ರಥಮತಃ ದೊಡ್ಡ ಪ್ರಮಾಣದ ಸೈನ್ಯದೊಂದಿಗೆ ದಿಲ್ಲಿಯ ಸುಲ್ತಾನನಾದ ಅಲ್ಲಾವುದ್ದೀನ್ ಖಿಲ್ಜಿಯು ೧೨೯೪ ರ ಹೊತ್ತಿನಲ್ಲಿ ದಕ್ಷಿಣ ಭಾರತಕ್ಕೆ ಪಾದಾರ್ಪಣೆ ಮಾಡಿ ದೇವಗಿರಿಗೆ ಮುತ್ತಿಗೆ ಹಾಕಿ ಅಲ್ಲಿಯ ಅರಸನಾದ ರಾಮದೇವನನ್ನು ಸೋಲಿಸಿ, ಕಪ್ಪವನ್ನು ಸೆಳೆದು ಹೊರಟು ಹೋದ ನಂತರ ಕನ್ನಡನಾಡಿನ ಜನಾಂಗಕ್ಕೆ ವಿಪತ್ಪರಂಪರೆಗಳು ಪ್ರಾರಂಭವಾದುವು. ಇಲ್ಲಿನ ಅಪಾರ ಐಶ್ವರ್ಯ ಅವರ ಕಣ್ಣನ್ನು ಕುಕ್ಕಿಸಿದವು.

ಅಲ್ಲಾವುದ್ದೀನ್ ಖಿಲ್ಜಿಯ ದಕ್ಷಿಣ ಭಾರತದ ದಾಳಿಯ ರುಚಿಯು ಅವನ ಸರದಾರನಾದ ಮಲ್ಲಿಕ್ ಖಾಫರ್‌ನಿಗೆ ಹತ್ತಿ ಅವನು ಕ್ರಿ. ಶ. ೧೩೦೯ ರಿಂದ ೧೩೧೧ರ ವರೆಗೆ ದೊಡ್ಡ ಪ್ರಮಾಣದಲ್ಲಿ ದಾಳಿಮಾಡಿ ಕನ್ನಡನಾಡಿನ ಪ್ರಸಿದ್ಧ ದೊರೆಗಳಾದ ಯಾದವರನ್ನೂ ಹೊಯ್ಸಳರನ್ನು ಸೋಲಿಸಿ ಅವರ ಐಶ್ವರ್ಯವನ್ನೆಲ್ಲ ಕೊಳ್ಳೆ ಹೊಡೆದನು ಹೆಚ್ಚು ಕಡಿಮೆ ದಕ್ಷಿಣ ಭಾರತವನ್ನೆಲ್ಲ ಅಲ್ಲೋಲಕಲ್ಲೋಲ ಗೊಳಿಸಿದನು. ಓರಂಗಲ್ಲಿನ ಪ್ರತಾಪರುದ್ರನನ್ನು ಸ್ವಾಧೀನ ಪಡಿಸಿಕೊಂಡು ಪಾಂಡ್ಯರ ರಾಜಧಾನಿಯಾದ ಮಧುರೆಯಲ್ಲಿ ತನ್ನ ಸೈನ್ಯವನ್ನು ಇಟ್ಟನು. ಮುಂದಿನ ದೆಹಲಿಯ ಹುಚ್ಚು ದೊರೆ ಮಹಮದ್ ಬಿನ್ ತೊಗಲಕನಂತೂ ಓರಂಗಲ್ಲು, ದೇವಗಿರಿಗಳನ್ನು, ದೆಹಲಿಯ ಒಂದುಭಾಗಗಳಂತೆಯೇ ಮಾಡಿದನು. ಕನ್ನಡಿಗರ ಆಶಾಕಿರಣದಂತಿದ್ದ, ಪ್ರಭಲ ರಾಜರಿಂದ ಕೂಡಿದ್ದ ಹೊಯ್ಸಳರ ದೋರ ಸಮುದ್ರ ವೀಗ ಹಾಳು. ಯಾದವರೂ ಮೂಲೆ ಗುಂಪು. ಇನ್ನುಳಿದ

ಚಿಕ್ಕ ಪುಟ್ಟ ಪಾಳೆಯ ಪಟ್ಟುಗಳ ಪಾಡೇನು? ಈ ಸ್ಥಿತಿ ಕ್ರಿ.ಶ. ೧೩೩೬ ರ ವರೆಗೆ ಅವ್ಯಾಹತವಾಗಿ ನಡೆಯಿತು. ಆಗ ಕನ್ನಡನಾಡಿನ ಜನತೆ ಕಣ್ಣು ಬಿಟ್ಟಿತು. ಕನ್ನಡ ನಾಡಿನೆಲ್ಲಿದ್ದ ಸಮಸ್ತ ಧರ್ಮಗಳು ಅಳಿಯ ತೊಡಗಿದವು. ಜನತೆ ಗಾಬರಿಗೊಂಡಿತು. ಕಂಪಲಿಯರಾಜನು ಹತನಾಗಿ ಅವನ ಇಬ್ಬರು ಮಕ್ಕಳು ಸೆರೆಹಿಡಿಯಲ್ಪಟ್ಟು ಮಹಮ್ಮದೀಯ ಧರ್ಮಕ್ಕೆ ಮತಾಂತರಗೊಳಿಸಿದುದಂತೂ ಕನ್ನಡಿಗರಿಗೆ ಗಾಬರಿಯನ್ನುಂಟುಮಾಡಿತು. ಧರ್ಮ ದೇವಾಲಯ, ಧರ್ಮ ಗ್ರಂಥಗಳ ಮೇಲೂ, ದಾಳಿ ಪ್ರಾರಂಭವಾಯಿತು. 1. ಆಗ ಸಮಗ್ರ ಕರ್ನಾಟಕವನ್ನು ಜಾಗೃತಿಗೊಳಿಸಿದ ಕೀರ್ತಿ ಮಠಾಧಿಪತಿಗಳಿಗೆ ಸಲ್ಲಬೇಕು. ಆ ಮಠಾಧಿಪತಿಗಳು ಯಾರೇ ಆಗಿರಬಹುದು, ಶೈವ, ಅದ್ವೈತ, ವಿಶಿಷ್ಟಾದ್ವೈತ, ಜೈನ,-ಇವರೆಲ್ಲ ಒಂದುಗೂಡಿದವು. ಧರ್ಮ ರಕ್ಷಣೆಗಾಗಿ ಸಂಸ್ಕೃತಿ, ಸಾಹಿತ್ಯ, ಶಿಲ್ಪಾದಿಗಳ ರಕ್ಷಣೆಗಾಗಿಯೇ ಒಂದು ಮಹಾ ಸಾಮ್ರಾಜ್ಯ ಕಟ್ಟುವ ತಮ್ಮ ಸಂನ್ಯಾಸ ಧರ್ಮವನ್ನು ಕ್ರಿಯಾಮುಖಗೊಳಿಸಿದರು. ಪಂಪಾ ಕ್ಷೇತ್ರದ ಕಾಳಾಮುಖಾಚಾರ್ಯ, ಕಾಶೀ ಕ್ರಿಯಾವಿಲಾಸಶಕ್ತಿ, ಶೃಂಗೇರಿ ಶ್ರೀ ಶಂಕರ ಭಗವತ್ಪಾದರ ಪರಂಪರೆಯ ಶಾರದಾಪೀಠಾಧಿಪತಿಗಳು ತಮ್ಮ ಮಠಮಾನ್ಯಗಳನ್ನು ಬಿಟ್ಟಿದ್ದು ನಾಡಿನುದ್ದಗಲಕ್ಕೂ ಸಂಚರಿಸಿದರು. ಇದೇ ಸಮಯದಲ್ಲಿಯೇ ವೀರಶೈವ ಶೂನ್ಯ ಪೀಠಾಧಿಪತಿಸ್ಥಾನಾಪನ್ನರಾಗಿದ್ದ ಹರದನಹಳ್ಳಿ (ಈಗಿನ ಚಾಮರಾಜನಗರ ತಾಲ್ಲೂಕು) ಜಗದ್ಗುರು ಗೋಸಲ ಸಿದ್ಧೇಶ್ವರರೂ ಧಾರ್ಮಿಕ ಕೆಚ್ಚು ನೆಚ್ಚುಗಳನ್ನು ಜನತೆಯಲ್ಲಿ ತುಂಬಲು ಸಂಚಾರಕೈಗೊಂಡರು. ದಕ್ಷಿಣ ಭಾರತವೆಲ್ಲ ಒಗ್ಗೂಡಿ ದಿಗ್ಗೆಂದು ಎದ್ದು ನಿಂತಿತು. ಹೊನ್ನಿನ ಹೊಳೆಹರಿಯಿತು. ಸಂಗಮವಂಶದ ಹಕ್ಕ ಭುಕ್ಕರೇ, ಮೊದಲಾದ ನಾಲ್ವರು ಸರದಾರರನ್ನು ಮುಂದೆ ಮಾಡಿ 'ವಿಜಯನಗರ' ಅಥವಾ (ವಿಜಯ ಕಲ್ಯಾಣವೆಂಬ ಹೆಸರಿನ ಧರ್ಮರಾಜ್ಯ ಸ್ಥಾಪನೆಯ ಪೂರ್ವ ರಂಗಕ್ಕೆ ಅಂದಿನ ದಕ್ಷಿಣ ಭಾರತದ ಸುಪ್ರಸಿದ್ಧ ಶೈವ ಕ್ಷೇತ್ರವಾದ ಪಂಪಾವಿರೂಪಾಕ್ಷನ ಸನ್ನಿಧಿಯಲ್ಲಿ ಪ್ರತಿಜ್ಞೆ ಮಾಡಿ ಪಂಪಾವಿರೂಪಾಕ್ಷನ ರಾಜಮುದ್ರೆಯನ್ನೇ ಮುಂದುಮಾಡಿ ಸಾಮ್ರಾಜ್ಯದ ಅಸ್ತಿಭಾರಹಾಕಿದರು. ಇದಕ್ಕೆ ಹೊಯ್ಸಳರ ಕೊನೆಯ ರಾಜನೂ, ಮಹಮ್ಮದೀಯರಿಂದ ಜರ್ಝರಿತಗೊಂಡವನೂ ಆದ ಮುಮ್ಮಡಿ ಬಲ್ಲಾಳನ ಪೂರ್ಣ ಆಶೀರ್ವಾದವೂ ದೊರಕಿತು. ಕಳೆದುಳಿದ ದ್ರವ್ಯವನ್ನೆಲ್ಲ ರಾಜರೂ, ಪಾಳೆಯಗಾರರೂ, ಜನತೆಯೂ, ವಿಜಯನಗರಕ್ಕೆ ಸುರಿಯಿತು. ಅದೇ ಹೊನ್ನಿನ ಮಳೆಗರೆದರೆಂಬ ಪವಾಡದ ಕಥೆ. ಧರ್ಮ ರಕ್ಷಣೆಗಾಗಿಯೇ ಸಾಮ್ರಾಜ್ಯದ ಸ್ಥಾಪನೆಯಾಯಿತು. 'ದಕ್ಷಿಣ ಭಾರತದ ಇತಿಹಾಸದಲ್ಲಿ ಧರ್ಮರಕ್ಷಣೆಯನ್ನೇ ಉದ್ದೇಶವಾಗಿಟ್ಟುಕೊಂಡ ಸಾಮ್ರಾಜ್ಯ ಬೇರೊಂದು ಇನ್ನೂ ಕಂಡು ಬಂದಿಲ್ಲ. ಇದೇ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ವೈಶಿಷ್ಟ್ಯ' ಜನತೆ ಮತ್ತು ರಾಜರುಗಳು ವೈಯಕ್ತಿಕ ಭಿನ್ನತೆಗಳನ್ನು ದೂರೀಕರಿಸಿದರು. ಬಡವ ಬಲ್ಲಿದರೆನ್ನದೆ, ಉಚ್ಚನೀಚರೆನ್ನದೆ ಪಂಡಿತ ಪಾಮರರೆನ್ನದೆ ಒಟ್ಟುಗೂಡಿದರು. ಸಮನ್ವಯ ಮನೋಭಾವಗಳನ್ನು ಬೆಳೆಸಿಕೊಂಡು ಏಕೀಭವಿಸಿ ಹೆಣಗಿದರು. ಈ ಕಾರಣದಿಂದ ಅತ್ಯಲ್ಪಕಾಲದಲ್ಲಿ ಪೂರ್ವ ಪಶ್ಚಿಮ ಘಟ್ಟಗಳ ಮಧ್ಯದ ನಾಡಾದ ದಕ್ಷಿಣಭಾರತವನ್ನು ಏಕ ಚಕ್ರಾಧಿಪತ್ಯದ ಸಿಳಲಿನಲ್ಲಿ ಸಮಾವೇಶಗೊಳಿಸಲು ಸಾಧ್ಯವಾಯಿತು. ಹಿಂದೂಗಳಿಗೆ ಹಿಂದೂ ಧರ್ಮಗಳಿಗೆ ಬಂದೊದಗಿದ್ದ ಪೀಡೆ ಪರಿಹಾರವಾಯಿತು. ಧರ್ಮಕ್ಕೆ ಸಂಸ್ಕೃತಿಗಳಿಗೆ ಆಧಾರ ಭೂತರಾಗಿದ್ದ ಮಠಾಧಿಪತಿಗಳಿಗೂ, ವಿದ್ವಾಂಸರಿಗೂ, ದೇವಾಲಯಾದಿಗಳಿಗೂ, ರಕ್ಷಣೆಯೊದಗಿತು. ವಿಜಯನಗರದ ಅಥವಾ ವಿಜಯ ಕಲ್ಯಾಣ ಈ ಹೆಸರಿನಲ್ಲಿ ಈ ಎಲ್ಲ ಅಂಶಗಳೂ ಧ್ವನಿತವಾಗುತ್ತಿವೆ. ವಿಜಯನಗರದ ಅರಸರು ನಾಮ ಮಾತ್ರ ಪ್ರಭುವು ನಿಜವಾಗಿ ಶ್ರೀ ವಿರೂಪಾಕ್ಷನೇ" ಆಗಿದ್ದನೆಂಬುದನ್ನಿಲ್ಲಿ ಗಮನಿಸಬಹುದು. ಶ್ರೀ ವಿರೂಪಾಕ್ಷನ ಹೆಸರೇ ರಾಜಮುದ್ರೆ. ವಿರೂಪಾಕ್ಷ ಮುಂದೆ ಅರಸರು ಅವನ ಹಿಂದೆ. ಈ ಉದ್ದೇಶಕ್ಕೆ ಭಂಗ ಬಂದಾಗಲೇ ಸಾಮ್ರಾಜ್ಯವು ಒಡೆಯಿತೆಂಬುದನ್ನು ಇಲ್ಲಿಯೇ ಸ್ಮರಿಸಿಕೊಳ್ಳಬಹುದು. ಇಂಥ ಪರಿಸ್ಥಿತಿಯಲ್ಲಿಯೇ ಮಹಿಮಾಶಾಲಿಗಳೂ, ಅಘಟಿತ ಘಟನಾ ಸಮರ್ಥರೂ ಆದ ಗೋಸಲ ಸಿದ್ಧೇಶ್ವರರು ತಮ್ಮ ಹರದನಹಳ್ಳಿ (ವಾಣಿಜ್ಯಪುರ)ಯ ಪೀಠದಲ್ಲಿ ಉತ್ತರಾಧಿಕಾರಿಯಾಗಿ ಶಂಕರಾಚಾರ್ಯ ಎಂಬುವರನ್ನು ಕುಳ್ಳಿರಿಸಿ ತಾವು ಸಂಚಾರ ಕೈಗೊಂಡರು. ಪರಕೀಯ ದಾಳಿಗೆ ತುತ್ತಾಗಲಿದ್ದ ನಾಡಿನ ಜನತೆಯಲ್ಲಿ ಧಾರ್ಮಿಕ ಪ್ರಜ್ಞೆತನ್ಮೂಲಕ ಕೆಚ್ಚು ನೆಚ್ಚುಗಳನ್ನು ಬೇರೂರಿಸಲು ತಮ್ಮ ಪಾಲಿನ ಕಾರ್ಯಕ್ಕೆ ತೊಡಗಿದರು.

**ಗೋಸಲ ಸಿದ್ಧೇಶ್ವರರು ಸಿದ್ಧಗಂಗೆಯಲ್ಲಿ ಮಠ ಸ್ಥಾಪಿಸಿದುದು (ಕ್ರಿ. ಶ. ಸು. ೧೩೦೦-೧೩೫೦)**

ಗೋಸಲ ಸಿದ್ಧೇಶ್ವರರು ಹರದನಹಳ್ಳಿ ನಿರಂಜನ ಜಗದ್ಗುರು ಪೀಠಾಚಾರ್ಯರಲ್ಲಿ ೧೫ ನೆಯವರು. ಇವರು ಶಂಕರಾಚಾರ್ಯರೆಂಬುವರನ್ನು ೧೬ ನೆಯ ಜಗದ್ಗುರುಗಳೆಂದು ಗೊತ್ತುಮಾಡಿ ಉತ್ತರಾಧಿಕಾರ ಕೊಟ್ಟು ತಾವು ಮಠವನ್ನು ಬಿಟ್ಟು ತಮ್ಮ ಅನುಯಾಯಿಗಳಾದ ೧೦೧ ಜನ ವಿರಕ್ತ ಮೂರ್ತಿಗಳೊಡನೆ ಕೂಡಿಕೊಂಡು ಧರ್ಮ ಜಾಗೃತಿಗೊಳಿಸುತ್ತ ಪ್ರಥಮತಃ ದಕ್ಷಿಣ ಭಾರತದ ಸುಪ್ರಸಿದ್ಧ ಶೈವ, ವೀರಶೈವ, ಜೈನ, ಅದ್ವೈತ ಸಿದ್ಧಾಂತಿಗಳ ಕೇಂದ್ರವಾಗಿದ್ದ ಶಿವಗಂಗೆಗೆ ಬಂದರು. ಅಲ್ಲಿ ಭಕ್ತರ ನೆರವಿನಿಂದ ೬೩ ಪುರಾತನರ ಮತ್ತು ಏಕಾದಶ ರುದ್ರಗಣಗಳ ಪೂಜೋತ್ಸವಗಳನ್ನು ನೆರವೇರಿಸಿದರು. ಅಲ್ಲಿ ಕೆಲವು ದಿನಗಳು ವಾಸ್ತವ್ಯ ಮಾಡಿ ಧರ್ಮ ಪ್ರಸಾರ ಕಾರ್ಯ ಕೈಗೊಂಡರು. ಆಮೇಲೆ ತಮ್ಮದೇ ಆದ ಒಂದು ಸ್ವತಂತ್ರ ವೀರಶೈವ ಕ್ಷೇತ್ರವನ್ನಾಗಿ ಮಾಡಿಕೊಳ್ಳಲು ಮನಸ್ಸು ಮಾಡಿ ಶಿವಗಂಗೆಯಿಂದ ವಾಯುವ್ಯಕ್ಕೆ ಸುಮಾರು ಮುಕ್ಕಾಲುಗಾವುದ (೯ ಮೈಲಿ) ದೂರದಲ್ಲಿದ್ದ ಕೇತ ಸಮುದ್ರದ ಪಕ್ಕದಲ್ಲಿರುವ ಬೆಟ್ಟಕ್ಕೆ ಬಂದರು. ತುಮಕೂರು, ಗೂಳೂರು ಸೀಮೆಯ ಭಕ್ತವೃಂದ ಶ್ರೀ ಗೋಸಲ ಸಿದ್ಧೇಶ್ವರರನ್ನು ಎದುರ್ಗೊಂಡಿತು. ಈ ಬೆಟ್ಟದ ಪರಿಸರದಲ್ಲಿ ತಮ್ಮೊಡನಿದ್ದ ನೂರೊಂದು ವಿರಕ್ತರಿಗೆ ನೂರೊಂದು ತಪೋನುಷ್ಠಾನ ಯೋಗ್ಯವಾದ ಗುಹೆಗಳನ್ನು ಕಲ್ಪಿಸಿದರು.

ತಾವು ಅಲ್ಲಿ ಭಕ್ತಾದಿಗಳ ನೆರವಿನಿಂದ ಒಂದು ಮಠವನ್ನು ಸ್ಥಾಪಿಸಿದರು ಪ್ರಥಮತಃ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಹರದನಹಳ್ಳಿ ಶೂನ್ಯ ಪೀಠಾಚಾರ್ಯರು ಸ್ಥಾಪಿಸಿದ ಮಠದ ಪರಂಪರೆಯೇ ಇಂದಿಗೂ ಸಾರೋದ್ಧಾರವಾಗಿ ನಡೆದುಕೊಂಡು ಬರುತ್ತಿದೆ. ಹರದನಹಳ್ಳಿಯ ಶೂನ್ಯ ಪೀಠಾಧೀಶರು ಯಾರು ತಾವಾಯಿತು! ತಮ್ಮ ಮಠವಾಯಿತು! ಎಂದು ತಮ್ಮ ಮಠದಲ್ಲಿ ಕುಳಿತವರಲ್ಲ. ಇಂದು ನಾಡಿನ ಉದ್ದಗಲಕ್ಕೂ ಇರುವ ಅನೇಕ ಗದ್ದುಗೆಗಳು, ಮಠಗಳು, ದೇವಾಲಯಗಳು ಈ ಪರಂಪರೆಯವರ ಬೃಹತ್ತು ಮಹತ್ತುಗಳನ್ನು ಸೂಚಿಸುವ ಮುಖ್ಯ ಅವಶೇಷಗಳಾಗಿವೆ. ಸಿದ್ಧಗಂಗಾ ಕ್ಷೇತ್ರದಲ್ಲಿ ಇಂದು ಹಳೆಯ ಮಠವೆಂದು ಹೇಳುವ ಮಠವೇ ಗೋಸಲ ಸಿದ್ಧೇಶ್ವರರು ಸ್ಥಾಪಿಸಿದ ಮಠ. ಅದರ ಕೆಲವು ಭಾಗಗಳು ಇತ್ತೀಚೆಗೆ ಅಭಿವೃದ್ಧಿಗೊಂಡಿರಬಹುದು. ೯ ಕಂಬಗಳ ಪಡಶಾಲೆಯ ವಿಚಿತ್ರ ರೀತಿಯ ಕಟ್ಟಡದ ಮಾದರಿಯನ್ನಲ್ಲಿ ನೋಡಬಹುದು. ೯ ಕಂಬಗಳ ಮೇಲೆ ಕೊರೆದ ಚಿತ್ರಗಳು ಅಂದಿನ ಶ್ರೀ ಮಠದ ಚರಿತ್ರೆಯನ್ನು ಪ್ರತಿಬಿಂಬಿಸುತ್ತದೆ.

---

1 (i) ವೈಷ್ಣವ ಆಚಾರ್ಯನಾದ ವೆಂಕಟನಾಥನು ತನ್ನ 'ಅಭೀತಿಸ್ತವದಲ್ಲಿ' "ಕಲಿಪ್ರಣಿಧಿ ಲಕ್ಷಣೈಃ ಕಲಿತ ಶಾಕ್ಯ ಲೋಕಾಯತೈಃ। ತುರುಷ್ಕಯವನಾದಿಭಿಃ ಜಗತಿ ಜೃಂಭಮಾಣಂ ಭಯಂ"॥
ಪ್ರಕೃಷ್ಟ ನಿಜಶಕ್ತಿಭಿಃ ಪ್ರಸಭಮಾಯುಧೈಃ ಪಂಚಭಿಃ। ಕ್ಷಿತಿ ತ್ರಿದಶರಕ್ಷಕೈಃ ಕ್ಷಿಪಯರಂಗನಾಥ ಕ್ಷಣಾತ್॥
ಹೀಗೆಂದು ರಂಗನಾಥನನ್ನು ಸ್ಮರಿಸುತ್ತಾನೆ,

(ii) ಬುಕ್ಕರಾಯನ ಸೊಸೆಯೂ, ಕಂಪಣರಾಯನ ಹೆಂಡತಿಯೂ ಆದ ಗಂಗಾದೇವಿಯು ತನ್ನ ವೀರ ಕಂಪಣರಾಯ ಚರಿತ್ರೆಯೆಂಬ ಸಂಸ್ಕೃತ ಗ್ರಂಥದಲ್ಲಿ.

"ಶ್ರುತಿ ರಸ್ತಮಿತಾನಃ ಪ್ರಲೀನೋ। ವಿರತಾಧರ್ಮಕಥಾಚ್ಯುತಂ ಚರಿತಂ॥
ಸುಕೃತಂಕ್ವಗತಂ ಅಭಿಜಾತ್ಯಮಸ್ತಂ। ಕಿಮಿವಾನ್ಯತ ಕಲಿರೇಕ ಏವಧನ್ಯಃ॥"
"ನತಥಾ ಕಟು ಘೂತ್ಕೃತಾತ್ ವೃಥಮೇ। ಹೃದಿಜೀರ್ಣೋ ಪವನೇಷು ಘೂಕಲೋಕಂತ್।
ಪರಿಶೀಲಿತ ಪಾರ್ಶ್ವಕವಾಗ್ ಭ್ಯೋ। ಯವನಾನಾಂಭವನೇಯಥಾ ಶುಕೇಭ್ಯಃ
"ಪ್ರಾಶಾಂತ ಧಾವೇವವನಾಂತಲಕ್ಷ್ಮೀಃ। ಗತೋಪರಾಗಾ ಗಗನಸ್ಥಲೀವ।
ಕಲಿಂದಜಾಮರ್ದಿತಕಾಲಿಯೇವ। ದಿಗ್ ದಕ್ಷಿಣಾಸೇತ್ ಕ್ಷತಪಾರಸೇತಾಃ॥

**ಗಂಗೋದ್ಭವ :-** ಗೋಸಲ ಸಿದ್ಧೇಶ್ವರರು ತಮ್ಮ ನೂರೊಂದು ವಿರಕ್ತರೊಡನೆ ಹೀಗೆ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಲಿಂಗಪೂಜೆ ಜಂಗಮ ದಾಸೋಹಾದಿ ಕ್ರಿಯೆಗಳಲ್ಲಿ ಇದ್ದು, ಧರ್ಮ ಜಾಗೃತಿಯ ಕಾರ್ಯವನ್ನು ಮುಂದುವರಿಸಿಕೊಂಡು ಬರುತ್ತಿರುವಾಗ, ಒಂದು ದಿನ ಈ ನೂರೊಂದು ವಿರಕ್ತರಲ್ಲಿ ಒಬ್ಬರಾಗಿದ್ದ ಶ್ರೀ ಗೋಸಲ ಸಿದ್ಧೇಶ್ವರರು ಶಿಷ್ಯರೆನಿಸಿದ್ದ ಮೂರ್ತಿಗಳೊಬ್ಬರು ಮಧ್ಯ ರಾತ್ರಿಯ ಸುಮಾರಿಗೆ ಅತ್ಯಂತ ತೃಷೆಗೊಂಡರು. ಅವರು ವಯೋವೃದ್ಧರು; ರಾತ್ರಿಯ ಕಗ್ಗತ್ತಲು ಎಲ್ಲೆಲ್ಲೂ ಆವರಿಸಿತ್ತು. ತಮ್ಮ ಗವಿಯಲ್ಲಿ ದೀಪ ಬೇರೆ ಇರಲಿಲ್ಲ. ಆದ್ದರಿಂದ ಹೊರಗೆ ಹೋಗಿ ನೀರನ್ನು ತರುವಂತೆ ರಲಿಲ್ಲ; ಕಳವಳ ಅಧಿಕವಾಯಿತು. ಇಂಥ ಸಮಯದಲ್ಲಿ ಆ ವಿರಕ್ತ ಮೂರ್ತಿಗಳು ತಮ್ಮ ಗುರುಗಳಾದ ಗೋಸಲ ಸಿದ್ದೇಶ್ವರರನ್ನು ಧ್ಯಾನಿಸಿದರು. ಗೋಸಲ ಸಿದ್ಧೇಶ್ವರರ ಅಂತಃಕರಣಕ್ಕೆ ಇವರ ಈ ಸ್ಥಿತಿ ಅರ್ಥವಾಗಿ ತತ್‌ಕ್ಷಣವೇ ತಮ್ಮ ಒಂದೆರಡು ಜನ ಶಿಷ್ಯರೊಡನೆ ತಾವಿದ್ದ ಹಳೆಯ ಮಠದಿಂದ ಹೊರಟು ಈ ವಿರಕ್ತ ಮೂರ್ತಿಗಳಿದ್ದ ಬೆಟ್ಟದ ಮಧ್ಯದ ಮಹಾ ಗುಹೆಗೆ, ಆ ಮಧ್ಯ ರಾತ್ರಿಯ ಕಗ್ಗತ್ತಿನಲ್ಲಿಯೇ ಬಂದರು. ಪರಿಸ್ಥಿತಿಯನ್ನು ಅರ್ಥಮಾಡಿಕೊಂಡರು. ಆ ಕ್ಷಣದಲ್ಲಿ ಮೊಳಕಾಲನ್ನು ಗುಹೆಯ ಕಲ್ಲುಬಂಡೆಗೆ ಬಲವಾಗಿ ಹೊಡೆದರು. ಅಲ್ಲಿ ಪಡುವು ಬಿತ್ತು. ಚಿಲ್ಲೆಂದು ಗಂಗಾಜಲವು ಉದ್ಭವವಾಯಿತು. ತೃಷೆಯಿಂದ ಸಂಕಟಗೊಂಡ ವಿರಕ್ತಮೂರ್ತಿಗಳಿಗೆ ಆ ಉದಕದಿಂದ ಸ್ನಾನ ಮಾಡಿಸಿ, ಭಸ್ಮ ಧರಿಸಿ ಶಿವ ಮಂತ್ರದೊಡನೆ ಲಿಂಗಮುಖದಿಂದ ಉದಕ ಪಾನ ಮಾಡಿಸಿ ಅವರ ನೀರಡಿಕೆಯ ಬಾಧೆಯನ್ನು ಹೋಗಲಾಡಿಸಿದರು. ಗೋಸಲ ಸಿದ್ಧೇಶ್ವರರ ಶಿವಯೋಗಿಯ ಪಾದ ಸ್ಪರ್ಶದಿಂದ ಹೊರ ಹೊರಟ ಆ ಗಂಗಾ ಜಲಕ್ಕೆ "ಸಿದ್ಧಗಂಗಾ" ಜಲವೆಂದು ಹೆಸರಾಯಿತು.2 ಅಂದಿನಿಂದ ಇಂದಿನವರೆಗೆ ಈ ಗಂಗಾಜಲದ ಸ್ನಾನ ಪಾನಾದಿಗಳನ್ನು ಅವಿಚ್ಛಿನ್ನವಾಗಿ ಸಮಸ್ತ ಕೋಮಿನ ಜನರು ಆಚರಿಸುತ್ತ ಬಂದಿದ್ದಾರೆ; ಜನ ಮನದ ಮೈಲಿಗೆಯನ್ನು ಈ ಶಿವಯೋಗಿಯ ಪಾದ ಸ್ಪರ್ಶಜಲ ಕಳೆಯುತ್ತಾ ಬಂದಿದೆ. ಈ ವಿಷಯದಲ್ಲಿ ಅಂದಿನಿಂದ ಇಂದಿನವರೆಗೆ ಜಾತಿ ಗೊಂದಲ ಅಡ್ಡಬಂದಿಲ್ಲ ಬಡವ ಬಲ್ಲಿದ ಭಾವ ಪ್ರತಿ ಬಂಧಕಗಳಿಸಿಲ್ಲ. ಇದೊಂದು ಸಮಸ್ತ ಕೋಮಿನ ಜನರ, ಅನೇಕ ದರ್ಜೆಯ ಜನರ ಭಾವೈಕ್ಯದ ಮಹಾ ಸೇತುವೆಯೆನಿಸಿ, ಪವಿತ್ರ ತೀರ್ಥವೆನಿಸಿ, ಕ್ಷೇತ್ರಪಾತ್ರ್ಯದ, ರಕ್ಷಾ ಕವಚವೆನಿಸಿ, ಸಿದ್ಧ ಶುದ್ಧಿಗಳ, ಆಗರವೆನಿಸಿ, ರುಚಿ ಶುಚಿಗಳ, ಸೈಪಿನ ಸ್ನೇಮೆಯೆನಿಸಿ ಮೆರೆಯುತ್ತಿರುವ ಅಂಶವೇನೂ ಯಾರೂ ಅರಿಯದ ವಿಷಯವಲ್ಲ. ಅಂತೆಯೇ ಶ್ರೀ ಕ್ಷೇತ್ರವು ಅದೇ ಸಂಪ್ರದಾಯವನ್ನು ಉಳಿಸಿಕೊಂಡು ಬೆಳೆಸಿಕೊಂಡು, ಸಮಸ್ತ ಕೋಮಿನ ಜನರ ಹಿತವನ್ನು ಸಾಧಿಸಿಕೊಂಡು ಬರುವ ಮಹಾಹೊಣೆ ಹೊತ್ತಿರುವುದನ್ನು ಇಂದಿಗೂ ಕಾಣಬಹುದಾಗಿದೆ.

ಸಿದ್ಧಗಂಗಾ ತೀರ್ಥದ ಬಗೆಗೆ ನಿರಂಜನ ವಂಶ ರತ್ನಾಕರದಲ್ಲಿ ವಿಶೇಷ ವರ್ಣನೆ (ಪುಟ-32) ಯಿದ್ದು, ಈ ತೀರ್ಥ ಸ್ನಾನ ಪಾನಾದಿಗಳಿಂದ ಬ್ರಹ್ಮ ಹಿತ್ಯಾದಿ

2. ನಿರಂಜನ ವಂಶ ರತ್ನಾಕರವೆಂಬ ಗ್ರಂಥದಿಂತ ಗಂಗಾಜಲವು ಗೋಸಲ ಸಿದ್ಧೇಶ್ವರರಿಂದ ಉದ್ಭವಗೊಂಡಿತೆಂದು ತಿಳಿದು ಬರುತ್ತದೆ, ಆದರೆ ಗ್ರಂಥಾಂತಗಳಿಂದ ಸ್ವಲ್ಪ ಭಿನ್ನಾಭಿಪ್ರಾಯವಿದೆ ಕ್ರಿ. ಶ. ೧೬೦೦ ರಲ್ಲಿದ್ದ ಹೇರೆರಬನೆಂಬ ಎಲಹಂಕದ ಕವಿಯು ಬರೆದ ಸಿದ್ಧಲಿಂಗೇಶ್ವರ ಸಾಂಗತ್ಯ ವೆಂಬ ಗ್ರಂಥದ ಪ್ರಕಾರ ಈ ಸಿದ್ಧಗಂಗಾ ಜವು ತೋಂಟದ ಸಿದ್ಧಲಿಂಗೇಶ್ವರರಿಂದೆ ಉಂಟಾಯಿತೆಂದು ಗೊತ್ತಾಗುತ್ತಿದೆ. ಗೋಸಲ ಸಿದ್ದೇಶ್ವರರಿಗೂ ಹೇರೆಂಬ ಕವಿಗೂ ಸುಮಾರು 300 ವರ್ಷಗಳ ಅಂತರವಿದ್ದು ಈ ದೀರ್ಘಾವಧಿಯಲ್ಲಿ ಕಥೆ ಹೇಗೆ ಹೇಗೂ ಬೆಳೆದ್ ಹದಿನೈದನೆಯ ಶತಮಾನದ ಮಧ್ಯಭಾಗದಲ್ಲಿ ಕರ್ನಾಟಕ, ಆಂಧ್ರ, ತಮಿಳುನಾಡುಗಳಲ್ಲೆಲ್ಲ ಮಹಾ ಪ್ರಭಾವ ಶಾಲಿಗಳೆನಿಸಿದ ತೋಂಟದ ಸಿದ್ಧಲಿಂಗ ಶಿವಯೋಗಿಗಳವರ ಸಂಬಂಧವನ್ನು ಪಡೆದಿದಿರಬಹುದು. ಈ ಹೊತ್ತಿಗಾಗಲೇ ಸಿದ್ಧಗಂಗಾ ತೀರ್ಥದ ಮಹತ್ತು ಬೃಹತ್ತುಗಳು ಜನ ಜನಿತವಾಗಿ ಹೋಗಿದ್ದುವು. ಅಂತಯೇ ಹೇರೆಂಬ ಕವಿ ತನ್ನ ಗ್ರಂಥದ ೧೬ ನೆಯ ಸಂಧಿಯಲ್ಲಿ ಈ ಸಿದ್ಧಗಂಗಾ ತೀರ್ಥದ ಬಗೆದೆ ವಿಶೇಶವಾಗಿ ಹೊಗಳಿದ್ದಾನೆ. ಈ ತೀರ್ಥವು ಅನೇಕ ಜನರ ಮಾನಸಿಕ ಮತ್ತು ದೈಹಿಕ ರೋಗ ಪರಿಹಾರವಾಗುತ್ತಿದೆಂದು ಹೇಳುವುದನ್ನು ಗಮನಿಸಬಹುದು. ಈ ಲೇಖನದಲ್ಲಿ ಮುಂದೆ ಆ ವಿಷಯವನ್ನು ಪ್ರಸ್ತಾಪಿಸಲಾಗಿದೆ. ೧೪ ನೆಯ ಶತಮಾನದಿಂದ ಇಂದಿನವರೆಗೆ ಅವಿಚ್ಛಿನ್ನವಾಗಿ ಗಂಗಾಪೂಜೆ ಮಾತೆಯ ಗಂಗಾ ಉಪಾಸನೆ ಸರ್ವ ಧರ್ಮಿಯರ ಶ್ರದ್ಧೆಯಲ್ಲಿ ಬೇರೂರಿ ನಡೆಯುತ್ತಿಲೇ ಇದೆ.



ದೋಷಗಳೂ, ಕುಷ್ಟರೋಗಗಳೂ, ಪರಿಹಾರವಾಗುತ್ತವೆಂದು ವರ್ಣಿಸಲಾಗಿದೆ. ಗೋಸಲ ಸಿದ್ಧೇಶ್ವರರಕಾಲದಲ್ಲಿಯೇ ಆ ಬೆಟ್ಟದಲ್ಲಿ ಸಿದ್ಧಗಂಗಾ ತಿರ್ಥದಬಳಿ ಭಕ್ತಾದಿಗಳೂ ಗಣಪರ್ವಾದಿಗಳನ್ನು ಮಾಡುತ್ತಿದ್ದರೆಂದು ಸೇವಾ ಕೈಂಕರ್ಯಾದಿಗಳನ್ನು ವಿಶೇಷವಾಗಿ ಆಚರಿಸುತ್ತಿದ್ದರೆಂದು ವಿವರಿಸಲಾಗಿದೆ. ಒಂದುವೇಳೆ ಜಲವು ಬತ್ತಿದರೆ ಭಕ್ತಾದಿಗಳೆಲ್ಲ ಸ್ನಾನಾದಿಗಳನ್ನುಮಾಡಿ ಭಕ್ತಿಯಿಂದ ಸಿದ್ಧೇಶ್ವರರನ್ನು ಭಜಿಸಿದರೆ ಮೊದಲಿನಂತೆ ಗಂಗಾಜಲವು ಬರುತ್ತೆದೆಂದೂ ಆ ಜಲವು ೧೦ ಸಾವಿರವರೆವಿಗೂ ಗಣತೃಪ್ತಿಮಾಡಬಹುದೆಂದೂ ಆ ಗ್ರಂಥ ತಿಳಿಸುತ್ತದೆ. 3

ಹೀಗೆ ಗೋಸಲಸಿದ್ಧೇಶ್ವರರು ತಮ್ಮ ನೆಲೆಯನ್ನು ಶ್ರೀ ಸಿದ್ಧಗಂಗೆಯಲ್ಲಿಮಾಡಿ, ಧರ್ಮ ಪ್ರಸಾರಗೊಳಿಸಿ, ಲಿಂಗೈಕ್ಯರಾದರೆಂದು ತಿಳಿದುಬಂದಿದೆ. ಆದರೆ ಈಗ ಬಂದಿರುವ ತೊಡಕೆಂದರೆ ಅವರ ಗದ್ದುಗೆಯ ವಿಚಾರ. ವಿಸ್ತಾರವಾದ ಕಾಲಪ್ರಾಂತದ ಮರೆಯಲ್ಲಿ ಗದ್ದುಗೆಯ ಸ್ಥಾನವು ಅಡಗಿದೆ. ಗೋಸಲ ಸಿದ್ಧೇಶ್ವರರು ಕೊನೆಯವರೆಗೆ ಶ್ರೀ ಸಿದ್ಧಗಂಗಾ ಮಾತೆಯಿರುವ ಗವಿಯಲ್ಲಿಯೇ ಶಿವಯೋಗಾನುಷ್ಠಾನ ಮಾಡಿದರು. ತಮ್ಮ ಹಿಂದಿದ್ದ ೧೦೧ ವಿರತರುಗಳಿಗೆ ಅನುಗ್ರಹಮಾಡಿ ಮುಂದೆ ಅವರು ಸಮಾಜದ ವಿವಿಧ ಭಾಗಗಳಲ್ಲಿ ಸಂಚರಿಸಿ ಧರ್ಮ ಜಾಗೃತಿಗೊಳಿಸಲು ಸಮರ್ಥರನ್ನಾಗಿ ಮಾಡಿದರು. ೧೦೧ ಜನ ವಿರತರ ಸಂಪ್ರದಾಯವನ್ನು ಉಂಟುಮಾಡಿದವರು ಪ್ರಾಯಶಃ ಗೋಸಲ ಸಿದ್ಧೇಶ್ವರರ ಸ್ವಾಮಿಗಳವರೇ ಆಗಿದ್ದಾರೆ. ಈ ಎಲ್ಲ ವಿಷಯಗಳನ್ನು ಲಕ್ಷಿಸಿ ರಾ. ಸ. ಫ. ಗು. ಹಳಕಟ್ಟಿಯವರು. ಕಲ್ಯಾಣದ ವಿನಾಶದ ನಂತರ ಪಟ್ಟದಕಲ್ಲು, ಪುಲಿಗೆರೆ, ಬನವಾಸಿ, ಬಳ್ಳಗಾವಿ, ಮಂಗಳವಾಡ, ಮುದನೂರು, ಕಪ್ಪಡಿಸಂಗಮ, ಪಟ್ಟಿಯಲ್ಲಿ ಸಿದ್ಧಗಂಗೆಯನ್ನು ಸೇರಿಸಿ ಇದು ಹರದನಹಳ್ಳಿ ಪೀಠಾಚಾರ್ಯರ ವಸಾಹತ್ತಾಗಿತ್ತೆಂದೂ ಧರ್ಮ ಪ್ರಸಾರ ಕೇಂದ್ರವಾಗಿತ್ತೆಂದೂ ಅಭಿಪ್ರಾಯ ಪಡುತ್ತಾರೆ. 4

ಬಸವಾದಿ ಪ್ರಥಮರ ನಂತರ ವೀರಶೈವೋದ್ಧಾರಣ ಕಾರ್ಯವನ್ನು ಬಹು ಬಿರುಸಾಗಿ ಪ್ರಭಾವಯುತವಾಗಿ ಮಾಡಿದವರೆ ಗೋಸಲ ಸಿದ್ಧೇಶ್ವರರು. ಅವರ ಹರದನಹಳ್ಳಿಯ ಪೀಠವು ಬಹುಶ: ಇವರ ಕಾಲದಲ್ಲಿಯೇ ಶೂನ್ಯ ಸಿಂಹಾಸನವೆಂದು ಅಂದಿನ ಸಮಾಜದಿಂದ ಅಂಗೀಕೃತವಾಗಿರಬಹುದು. ಕಲ್ಯಾಣದ ಕ್ರಾಂತಿಯು ನಂತರ ಶೂನ್ಯ ಸಿಂಹಾಸನ, ಅದರ ಆಧಿಪತ್ಯಗಳೂ, ವಿಚ್ಛಿತಿ,

ಮತ್ತು ದೈಹಿಕ ರೋಗ ಪರಿಹಾರವಾಗುತ್ತದೆಂದು ಹೇಳುವುದನ್ನು ಗಮನಿಸಬಹುದು. ಈ ಲೆಖನದಲ್ಲಿ ಮುಂದೆ ಆ ವಿಷಯವನ್ನು ಪ್ರಸ್ತಾಪಿಸಲಾಗಿದೆ. ೧೪ ನೆಯ ಶತಮಾನದಿಂದ ಇಂದಿನವರೆಗೆ ಅವಿಚ್ಛಿನ್ನವಾಗಿ ಗಂಗಾಪೂಜೆ ಗಂಗಾಮಾತೆಯ ಉಪಾಸನೆ ಸರ್ವಧರ್ಮಿಯರ ಶ್ರದ್ಧೆಯಲ್ಲಿ ಬೇರೂರಿ ನಡೆಯುತ್ತಲೇಇದೆ

3 ಸಿದ್ಧಗಂಗಾ ಕ್ಷೇತ್ರದ ಬೆಟ್ಟದಲ್ಲಿ ಈಗ ಸಿದ್ಧಲಿಂಗೇಶ್ವರ ಮೂರ್ತಿಯ ದೇವಾಲಯದ ಎದುರಿನ ಮಹಾ ಗುಹೆಯೇ ಸಿದ್ಧಗಂಗಾಮಾತೆಯ ಸ್ಥಾನ. ೧೦-೧೨ ಆಳೆತ್ತರದ ಮಹಾಕೋಡುಗಲ್ಲು ನಿಂತಿದ್ದು, ಆ ಕೋಡುಗಲ್ಲಿನ ಕೆಳಭಾಗದಲ್ಲಿ ಮಹಾ ಗುಹೆಯೊಂದು ಆಕೃತಿಯಿಂದಲೇ ನಿರ್ಮಾಣವಾಗಿದೆ. ಆ ಗುಹೆ ಸುಮಾರು 70-80 ಜನರು ಕೂಡಲು ಯೋಗ್ಯವಾಗಿದೆ. ಅಲ್ಲಿಯೇ ಬಂಡೆಯ ಮಧ್ಯದಲ್ಲಿ ಸಿದ್ಧಗಂಗೋದ್ಭವವಾಗಿದೆ. ಅದರಲ್ಲಿ ಜಲವನ್ನು ತೆಗೆದಷ್ಟು ಬರುತ್ತದೆ. ಆದರೆ ಉಕ್ಕಿ ಹರಿಯುವುದಿಲ್ಲ. ವಿಶೇಷ ಮಳೆಗಾಲದಲ್ಲಿಮಾತ್ರ, ಒಮ್ಮೊಮ್ಮೆ ಉಕ್ಕುವುದುಂಟು ಹಾಗೆ ಉಕ್ಕಿದ ವರ್ಷ ಸಮೃದ್ಧವಾದ ಮಳೆ ಬೆಳೆಗಳಿಂದ ಕೂಡಿದ ವರ್ಷವೆಂದೂ ನಂಬಿಕೆ. ಗಂಗೋದ್ಭವವಾಗಿರುವ ಸ್ಥಾನದ ಮುಂಭಾಗದಲ್ಲಿ ಎರಡು ಮೆಟ್ಟಲುಗಳ ಆಳದ ತಗ್ಗು ಇದೆ. ಇದು ಶಿಲಾಮಯವೇ ಆಗಿದೆ. ಅದರ ತುಂಭ ನೀರು ನಿಲ್ಲುತ್ತದೆ. ಈ ಭಾಗವನ್ನು ದಾಟಿಯೇ ಮುಂದಿನ ತಪೋನುಷ್ಠಾನ ಯೋಗ್ಯವಾದ ಗುಹೆಯನ್ನು ಪ್ರವೇಶಿಸಬೇಕು. ಅಲ್ಲಿ ಒಳ ಭಾಗ ವಿಶಾಲವಾಗಿದೆ, ಒಳಗೆ ಪ್ರವೇಶಿಸಿದೊಡನೆಯೇ ಎಂತಹ ಚಂಚಲ ಚಿತ್ತನಿಗೂ ಮಾನಸಿಕ ಸಂಗ್ರಹ ಉಂಟಾಗಿ ಶಿವಜ್ಞಾನವು ಎಚ್ಚರಗೊಳ್ಳುತ್ತದೆ. ಚಿತ್ತ ವೃತ್ತಿಯಲ್ಲಿ ಸಂಶಯಉಂಟಾಗುವುದನ್ನು ಅಲ್ಲಿ ಹೋಗಿ ನೋಡಿ ಅನುಭವಿಸಬೇಕು.

4. ಶಿವಶರಣರ ಚರಿತ್ರೆ ಭಾಗ 2 ಪುಟ 28 ( 1951 )

ಗೊಂಡುವಷ್ಟೇ ಪುನಃ ಶೂನ್ಯ ಸಿಂಹಾಸನದ ಸ್ಥಾನ ನಿರ್ದೇಶನ ಗೊಳಿಸಲು ಪ್ರಯತ್ನ ನಡೆದಿದೆ. ಮೊದಲ ಪ್ರಯತ್ನ ಶಿವಗಂಗೆ ಎಂದು ತಿಳಿದು ಬರುತ್ತದೆ, ಆದರೆ ಆ ಪ್ರಯತ್ನ ಯಶಸ್ವಿಗಳಿಸಲಿಲ್ಲ. ರೇವಣಸಿದ್ಧೇಶ್ವರರು ತಾವೇ ಒಂದು ಮಠವನ್ನು ಸ್ಥಾಪಿಸಿ ಮಗನಾದ ರುದ್ರ ಮುನಿಯನ್ನೊಡಗೊಂಡು ಶಿವಗಂಗೆಯಲ್ಲಿ ಅದ್ಭುತ ಕಲ್ಯಾಣ ಮಾಡಿದರು. ರೇಣುಕಾಚಾರ್ಯರು ಮತ್ತು ರುದ್ರಮುನಿ ಶಿವಾಚಾರ್ಯರ ಲಿಂಗೈಕ್ಯಾನಂತರ ಆ ಕಾರ್ಯಗಳು ಸ್ಥಗಿತಗೊಂಡವು. ಮುಂದೆ ಹರದನಹಳ್ಳಿಯಲ್ಲಿ ವೀರ ಬಣಂಜುಗಳವರಿಂದ ಶೂನ್ಯ ಪೀಠದ ಪರಂಪರೆ ಪುನಃ ನಡೆದು ಬರುವಂತೆ ಮಾಡಿದ ಪ್ರಯತ್ನ ಕುತೂಹಲಕಾರಿಯಾದುದು. ಹರದನಹಳ್ಳಿಯ ಮಠದ ಪರಂಪರೆಯಲ್ಲಿ ಗೋಸಲ ಸಿದ್ಧೇಶ್ವರರು ೧೫ ನೆಯವರಾದರೂ ಹಿಂದಿನವರೆಗೆ ಜಗದ್ಗುರು ಎಂಬ ಸಂಕೇತ ಇತ್ತೋ ಇಲ್ಲವೋ ಗೊತ್ತಿಲ್ಲ.[5]

( ಮುಂದುವರಿವುದು )

---

5. ಶ್ರೀ ತೋಂಟದ ಸಿದ್ಧಲಿಂಗೇಶ್ವರರು ತಮ್ಮ ವಚನದಲ್ಲಿ ತಮ್ಮ ಗುರುಪರಂಪರೆಯನ್ನು ಹೇಳಿಕೊಂಡಿದ್ದಾರೆ. ಅದರಲ್ಲಿ 1) ಅನಾದಿಗಣೇಶ್ವರ 2) ಬಸವಪ್ರಭುದೇವರು 3) ನಿರ್ಮಾಯಗಣೇಶ್ವರ 4) ನಿರಂಜನಗಣೇಶ್ವರ 5) ಜ್ಞಾನಾನಂದ ಗಣೇಶ್ವರ 6) ಆತ್ಮಗಣೇಶ್ವರ 7) ಆಧ್ಯಾತ್ಮಗಣೇಶ್ವರ 8) ರುದ್ರಗಣೇಶ್ವರ 9) ಬಸವಪ್ರಭುದೇವರು 10) ಆದಿಲಿಂಗ ದೇವರು 11) ಚನ್ನವೀರೇಶ್ವರ ದೇವರು 12) ಹರದನಹಳ್ಳಿಯ ಗೋಸಲದೇವರು 13) ಶಂಕರದೇವರು 14) ದಿವ್ಯಲಿಂಗದೇವರು 15) ಚೆನ್ನಬಸವೇಶ್ವರರು 16) ತೋಂಟದ ಸಿದ್ಧಲಿಂಗೇಶ್ವರರೆಂದು-ಹೀಗೆ ಗುರುಪರಂಪರೆಯ ಹೆಸರುಗಳ ಪಟ್ಟಿ ಬಂದಿದೆ. ಶೂನ್ಯ ಸಿಂಹಾಸನವನ್ನೇರಿದ ಪ್ರಭುದೇವರು, ಚೆನ್ನಬಸವಣ್ಣನವರು ಮತ್ತು ಸಿದ್ಧರಾಮೇಶ್ವರರು-ಇವರನ್ನು ಸೇರಿಸಿ ಗೋಸಲ ಸಿದ್ಧೇಶ್ವರರನ್ನು ೧೫ ನೆಯ ಸೂನ್ಯ ಸಿಂಹಾಸನಾಧೀಶ್ವರರೆಂದು ಹೇಳುವ ಪರಿಪಾಠವಿದೆ. ಇಲ್ಲಿ ಹರದನಹಳ್ಳಿಯ ಹೆಸರು ಬಂದಿರುವುದು ಕೇವಲ ಗೋಸಲ ದೇವರಿಂದಲೇ. ತೊಂಟದ ಸಿದ್ಧಲಿಂಗ ಯತಿಗಳು ಹೇಳಿದ ಇದೇ ಪರಂಪರೆಯನ್ನೇ ವಿರಕ್ತ ತೊಂಟದಾರ್ಯರು ತಮ್ಮ ಸಿದ್ಧೇಶ್ವರ ಪುರಾಣದಲ್ಲಿಯೂ ಹೇಳಿದ್ದಾರೆ. ( ಸಂ. ೨ ಪದ್ಯ೧-೩೨-೩೩ ) ನಿರಂಜನ ವಂಶರತ್ನಾಕರದಲ್ಲಿ ಇದೇ ಪರಿವಿಡಿಯನ್ನೇ ಅನುಸರಿಸಿ ಈ ಎಲ್ಲಾ ಸ್ವಾಮಿಗಳವರು ಸಂಚರಿಸಿ ಉಪದೇಶ ಮಾಡಿದ ಕಾರ್ಯ ಪವಾಡ ಮತ್ತು ಲಿಂಗೈಕ್ಯ ಸ್ಥಳಗಳನ್ನು ತಿಳಿಸಿದೆ. ಆದರೆ ಸಿದ್ಧೇಶ್ವರರ ಪುರಾಣದಲ್ಲಿ ಪ್ರಭುದೇವರು, ಚನ್ನಬಸವಣ್ಣನವರು ಸಿದ್ಧರಾಮೇಶ್ವರರ ಹೆಸರನ್ನು ಹೇಳಿಲ್ಲ.

---





# ಭಾರತದಲ್ಲಿ 'ದೇವಾಲಯ ಮತ್ತು ಮಠಗಳು ನಡೆದು ಬಂದ ದಾರಿ"

— ಪಂ॥ ಷಣ್ಮುಖಯ್ಯ ಅಕ್ಕೂರ ಮಠ

ಭಾರತದಲ್ಲಿದೇವಾಲಯಗಳ ನಿರ್ಮಾಣ ಮೂರ್ತಿ ಶಿಲ್ಪಿ ಮತ್ತು ವಾಸ್ತು ಶಿಲ್ಪಿಗಳ ವಿವರಣೆ ಆಗಮುಗಳಲ್ಲಿಯೇ ದೊರೆಯುತ್ತದೆ. ಜನಗಳ ದೈವ ಭಕ್ತಿ ಆರಾಧನೆಗೆ ತೊಡಗಿದಾಗ ಆರಾಧನೆ ಕ್ರಮುಗಳನ್ನೇ ಶಾಸ್ತ್ರದ ಅಸ್ತಿಬಾರದ ಮೇಲೆ ನಿಲ್ಲಿಸಿ ಪ್ರೌಢ ವಾಗ್ಮಯನನ್ನೇ ನಿರ್ಮಿಸಿದರು. ಇದನ್ನೇ ಆಗಮುವೆಂದು ಕರೆದರು. ಆರಾಧನೆಯ ಕ್ರಮ - ಪೂಜಾ ವಿವರಗಳನ್ನು ವಿವರಿಸುವ ಶಾಸ್ತ್ರವೇ ಆಗಮುಶಾಸ್ತ್ರ. ಆಗಮುಗಳು ವೇದಕ್ಕಿಂತಲೂ ಪೂರ್ವಕಾಲದವು. ವೈದಿಕ ಯುಗಕ್ಕಿಂತ ಮೊದಲು ಸೈಂಧವ ಸಂಸ್ಕೃತಿ [ಹರಪ್ಪಾ ಮೊಹೆಂಜೋದಾರ್] ಅಲ್ಲಿ ದೇವತಾ ಮೂರ್ತಿಗಳು ಶಿವನ ಮೂರ್ತಿಯು ದೊರೆತಿರುವುದು ಇತಿಹಾಸ ಬಲ್ಲವರಿಗೆ ಗೊತ್ತಿರುವ ಸಂಗತಿ. ವೇದ ಪೂರ್ವಯುಗಲ್ಲಿ ಪೂಜಾ ಪದ್ಧತಿ ಮಾತ್ರ ಇತ್ತು ಶಿವ-ಶಕ್ತಿಯರ ಪೂಜೆ-ಉಪಾಸನೆ ವೈದಿಕ ಯುಗಕ್ಕಿಂತ ಪೂರ್ವದ್ದು "ಪೂಜಾ" ಎನ್ನುವ ಸಂಸ್ಕೃತದ ಪದದ ಮೂಲ ದ್ರಾವಿಡ ಭಾಷೆ 'ಪೂಸ್' ಎಂದು ಭಾಷಾ ಶಾಸ್ತ್ರಜ್ಞರ ಅಭಿಮತವಾಗಿದೆ.

ಶೈವ ಸಂಸ್ಕೃತಿ ದ್ರಾವಿಡರದು. ಆರ್ಯ ದ್ರಾವಿಡರ ಅಂತಃ ಕಲಹದಲ್ಲಿ ಆರ್ಯರು ದ್ರಾವಿಡರ ಆರಾಧ್ಯ ದೈವ ಶಿವ-ಶಕ್ತಿಯರನ್ನು ನಿಂದಿಸಿದರಲ್ಲದೆ ಶೈವ ಸಿದ್ಧಾಂತವನ್ನು ಸಾರುವ, ಆಗಮು ಶಾಸ್ತ್ರವನ್ನು ಖಂಡಿಸಿದರು. ಅಲ್ಲದೆ ಶೈವ ಧರ್ಮದ ಅನುಯಾಯಿಗಳನ್ನು ಸರ್ವಧರ್ಮ ಬಹಿಷ್ಕೃತರೂ-ವ್ರಾತ್ಯರೂ ಎಂದು ಕರೆದರು ಕಾಲ ಕಳೆದಂತೆ ಆರ್ಯ-ದ್ರಾವಿಡರಲ್ಲಿ ಪರಸ್ಪರ ಅರಿವು ಮೂಡಿ ಪರಸ್ಪರರ ಧರ್ಮಾಚರಣೆಗಳನ್ನು ಗೌರವಿಸತೊಡಗಿದರು. ವೈದಿಕರು ಶಿವ-ಶಕ್ತಿಯರನ್ನು ವೈದಿಕ ಸಂಪ್ರದಾಯದಲ್ಲಿ ಸೇರಿಸಿಕೊಂಡರು ಆಗಮಿಕರ ಶಿವ, ವೈದಿಕರಲ್ಲಿ 'ರುದ್ರ' ನೆಂಬ ಹೊಸ ಅಭಿದಾನವನ್ನು ಪಡೆದ. ಯಜುರ್ವೇದದ ರುದ್ರಾಧ್ಯಾಯ ಶಿವನ (ರುದ್ರನ) ವರ್ಣನೆಗೆ ಮೀಸಲಾಯಿತು. ಅಂತೆಯೇ ದ್ರಾವಿಡರೂ ಸಹ ತಮ್ಮ ಆಗಮು ಸಂಪ್ರದಾಯದಲ್ಲಿ ವಿಷ್ಣುವಿಗೂ ಮಾನ್ಯತೆಯನ್ನು ನೀಡಿ ಪಾಂಚರಾತ್ರ-ವೈಖಾನಸ-ತಂತ್ರ ಸಾಗರಗಳನ್ನು ರಚಿಸಿದಂತೆ ಕಂಡು ಬರುತ್ತದೆ. ಆದರೂ ಭರತ ಖಂಡದಲ್ಲಿ ವಿಪುಲವಾದ - ವಿಸ್ತಾರವಾದ ಆಗಮು ಸಾಹಿತ್ಯ ಹೆಚ್ಚು ಪ್ರಚಾರವಾಗಲಿಲ್ಲ. ಕಾರಣ ವೈದಿಕರ ವಿರೋಧ ಭಾವನೆಯೇ ಆಗಿತ್ತು.

ಆಗಮುಗಳ ಸಾಹಿತ್ಯ ಚತುರ್ವೇದ ಸಾಹಿತ್ಯದಷ್ಟು ವಿಸ್ತಾರವಾಗಿದೆ. ವೈದಿಕ ಸಾಹಿತ್ಯಕ್ಕೆ ಹೊಯ್ಕೈಯ್‌ಯಾಗಿ ನಿಲ್ಲುವಷ್ಟು ಗಾತ್ರ-ಪಾತ್ರದಲ್ಲಿದೆ. ಆಗಮುಗಳ ಉಗಮು ಕಾಶ್ಮೀರದಲ್ಲಿ ಬೆಳೆದದ್ದು ದಕ್ಷಿಣ ಭಾರತದಲ್ಲಿ ಉತ್ತರ ಭಾರತದಲ್ಲಿ ವೈದಿಕರ ವಿರೋಧದಿಂದಾಗಿ ಆಗಮುಗಳು ಹೆಚ್ಚು ಪ್ರಚಾರವಾಗಲಿಲ್ಲ.

ಆಗಮು ಸಾಹಿತ್ಯದ ಕ್ರಿಯಾ ಪಾದದಲ್ಲಿ ದೇವಾಲಯದ ನಿರ್ಮಾಣ ಪೂಜಾ ಪದ್ಧತಿ-ಮೂರ್ತಿ ಶಿಲ್ಪ, ವಾಸ್ತು ಶಿಲ್ಪದ ವಿಷಯಗಳು ನಿರೂಪಿಸಲ್ಪಟ್ಟಿರುತ್ತವೆ. ವಾತುಲಾಗಮುದಲ್ಲಿ ಈ ವಿಷಯ ವಿಸ್ತಾರವಾಗಿ ಪ್ರತಿಪಾದಿತವಾಗಿರುತ್ತದೆ. ವೇದಗಳಲ್ಲಾಗಲೀ ಸ್ಮೃತಿಗಳಲ್ಲಾಗಲೀ ಮೂರ್ತಿ ಪೂಜೆ ವಾಸ್ತುಶಿಲ್ಪಿಗಳ ಪ್ರಸ್ತಾಪ ಕಂಡು ಬರುವುದಿಲ್ಲ. ಸ್ಮೃತಿಕಾರರಾದ ಮನು-ಗೌತಮರು ತಮ್ಮ ಸ್ಮೃತಿಗಳಲ್ಲಿ ಈ ವಿಚಾರವನ್ನು ಪ್ರಸ್ತಾಪಿಸಿರುವುದಿಲ್ಲ. ಆದರೆ ಸಂಹಿತೆಗಳಲ್ಲಿ ಈ ವಿಚಾರ ತಿಳಿದು ಬರುತ್ತದೆ. ಬೃಗು ಸಂಹಿತೆಯಲ್ಲಿ ದೇವರ ಉತ್ಸವ ವಿಚಾರ ಈಶ್ವರ ಸಂಹಿತೆಯಲ್ಲಿ ಪೂಜಾ ವಿಧಾನ, ಹಯಶೀರ್ಷ ಸಂಹಿತೆಯಲ್ಲಿ ಪ್ರತಿಷ್ಠಾಪನಾ ವಿಚಾರ, ಪೌಷ್ಕರ ಸಂಹಿತೆಯಲ್ಲಿ, ಮಹಾ ಸನತ್ಕುಮಾರ ಸಂಹಿತೆಯಲ್ಲಿ ಮೂರ್ತಿ ಪೂಜೆಯ ವಿಚಾರ, ಅನಿರುದ್ಧ ಸಂಹಿತೆಯಲ್ಲಿ ಪ್ರತಿಮಾ ಪ್ರತಿಷ್ಠಾಪನಾ ವಿಚಾರಗಳು ಕಂಡುಬರುತ್ತವೆ. ಶಿಲ್ಪರತ್ನಾಕರ-ವಿಷ್ಣು ಧರ್ಮೋತ್ತರದಲ್ಲೂ ಶಿಲ್ಪ ಕಲೆಯ ವಿಚಾರ ವಿಸ್ತಾರವಾಗಿ ವಿವರಿಸಲ್ಪಟ್ಟಿರುತ್ತದೆ.

ಆಗಮುವನ್ನು ತಿಳಿದವನು 'ಆಗಮಿಕ' ಮೂರ್ತಿ ಸ್ಥಾಪನೆಮಾಡುವವನು 'ಸ್ಥಾಪಕ' ದೇವಾಲಯ ನಿರ್ಮಾಣ

ಮಾಡುವವ 'ಸ್ಥಪತಿ' ಮೂರ್ತಿಮಾಡುವವ "ಶಿಲ್ಪಿ" ಹೀಗೆ ಭಾರತದಲ್ಲಿ ದೇವಾಲಯಗಳ ಶಿಲ್ಪ, ವಾಸ್ತುಶಿಲ್ಪಗಳ ವಿಚಾರಕ್ಕೆ ಆಗಮಗಳ ನಂತರ ಸಂಹಿತೆಗಳೂ ಆಕರ ಹಾಗೂ ಆಧಾರ ಗ್ರಂಥಗಳಾಗಿವೆ.

ಅಲ್ಲದೆ ಪುರಾಣಗಳಲ್ಲೂ ಅಲ್ಲಲ್ಲಿ ಶಿಲ್ಪ ವಿಚಾರ ಕಂಡು ಬರುತ್ತದೆ. ಅಲ್ಲದೆ ಈ ವಿಷಯವನ್ನೇ ಅಧಿಕರಿಸಿ ಶಿಲ್ಪ ರತ್ನಾಕರದಂತಹ ಸ್ವತಂತ್ರ ಗ್ರಂಥಗಳೂ ರಚನೆಯಾದವು.

ನಮ್ಮ ದೇಶದಲ್ಲಿ ದೈವೀ ಆರಾಧನೆ ಆಗಮಗಳ ಕಾಲದಲ್ಲಿ ಸಾಕಾರ ರೂಪದಲ್ಲಿ ಆರಂಭವಾಗಿ ವೇದ–ಉಪನಿಷತ್–ಸ್ಮೃತಿಗಳ ಕಾಲದಲ್ಲಿ ನಿರಾಕಾರ ರೂಪದಲ್ಲಿ ಕಂಡು ಬಂದು ಪುರಾಣ ಕಾಲದಲ್ಲಿ ಸಾಕಾರ ಪೂಜೆಯಲ್ಲಿ ಪರ್ಯವಸಾನ ಹೊಂದಿತು. ಆಗಮಗಳಲ್ಲಿ ದೇವಾಲಯಗಳ ವಿಷಯ ವಿಪುಲವಾಗಿ ಬಂದರೂ ದೇವಾಲಯಗಳು ನಿರ್ಮಾಣವಾದಂತೆ ಕಂಡು ಬರುವುದಿಲ್ಲ.

ವೇದೋಪನಿಷತ್ತುಗಳ ಕಾಲದಲ್ಲಿ ಋಷ್ಯಾಶ್ರಮಗಳಿದ್ದವು. ಅರಣ್ಯದಲ್ಲಿ ಋಷಿಗಳು ತಮ್ಮ ಆಶ್ರಮದಲ್ಲಿ ನೂರಾರು ಜನ ಶಿಷ್ಯರನ್ನು ಶಾಸ್ತ್ರ ಪಾರಂಗತರನ್ನಾಗಿ ಮಾಡುತ್ತಿದ್ದರು. ಶಿಷ್ಯರೆಲ್ಲ ಗೃಹಸ್ಥಾಶ್ರಮ ಸ್ವೀಕರಿಸುತ್ತಿದ್ದರು. ಆಗಿನ ಕಾಲದಲ್ಲಿ ಹೆಚ್ಚಾಗಿ ಬ್ರಹ್ಮ ಜ್ಞಾನಿಗಳಿದ್ದರು. ಸನ್ಯಾಸಿಗಳು ಇರುತ್ತಿರಲಿಲ್ಲ. ಗೃಹಸ್ಥಾಶ್ರಮಕ್ಕೆ ಹೆಚ್ಚು ಗೌರವವಿತ್ತು. ಉಪನಿಷತ್ಕಾಲದ ಋಷಿಗಳೆಲ್ಲ ಗೃಹಸ್ಥರಾಗಿದ್ದರು.

ಕಾಲಕ್ರಮೇಣ ರಾಜರು ತಮ್ಮ ಮಕ್ಕಳನ್ನು ಗುರುಕುಲ (ಆಶ್ರಮ) ಕ್ಕೆ ಕಳಿಸದೆ ಜ್ಞಾನಿಗಳೂ–ತಪಸ್ವಿಗಳೂ ಆಚಾರ ಸಂಪನ್ನರಾದ ಬ್ರಾಹ್ಮಣರನ್ನು ಕರೆಯಿಸಿ ತಮ್ಮ ರಾಜಧಾನಿಗೆ ಸಮೀಪದಲ್ಲಿ ಅವರಿಗೆ ಅಶನ-ವಸನ ವಸತಿ ಸೌಕರ್ಯ ಏರ್ಪಡಿಸಿ ಗ್ರಾಮ ಭೂಮಿಗಳನ್ನು ದಾನವಾಗಿ ಕೊಡುತ್ತಿದ್ದರು. ಅವೇ ಅಗ್ರಹಾರಗಳಾದವು ಆ ಅಗ್ರಹಾರ ಮಧ್ಯದಲ್ಲಿ ವೈಷ್ಣವ ದೇವಾಲಯ- ಈಶಾನ್ಯ ಭಾಗದಲ್ಲಿ ಶೈವ ದೇವಾಲಯಗಳನ್ನು ನಿರ್ಮಿಸುತ್ತಿದ್ದರು. ಸಂಶೋಧಕರಾದ ವಿದ್ವಾಂಸರ ಪ್ರಕಾರ ಭಾರತದಲ್ಲಿ ಅತ್ಯಂತ ಪ್ರಾಚೀನ ದೇವಾಲಯ ಷಿಕಾರಿಪುರ ( ಶಿವಮೊಗ್ಗೆ ಜಿಲ್ಲೆ ) ತಾಲ್ಲೂಕಿನ ತಾಳಗುಂದದ 'ಬಸವೇಶ್ವರ ವೇವಾಲಯ' ಹಾಗೂ ವಿದಿಶಾ ನಗರದ ದೇವಾಲಯ ಮಧ್ಯಪ್ರದೇಶದ ವಿಲಾಸಪುರ ಜಿಲ್ಲೆಯ ಬರ್ಹಿಕರ್ ಗ್ರಾಮದ ಮೂರ್ತಿ ಶಿಲ್ಪಿಗಳು [ವಿಷ್ಣು ವಾಸುದೇವನ ೨ ಅಡಿ ಎತ್ತರದ ಮೂರ್ತಿಗಳು] ಹಾಗೂ ದೇವಾಲಯ ಮೇಲ್ಕಂಡ ಈ ಎಲ್ಲ ದೇವಾಲಯಗಳು ಕ್ರಿ. ಪೂ. 1 ಮತ್ತು 2 ನೆಯ ಶತಮಾನವೆಂದು ಖಚಿತವಾಗಿ ತಿಳಿದು ಬಂದಿದೆ. ನಂತರ ಭಾರತದ ದ್ವಾದಶ ಜ್ಯೋತಿರ್ಲಿಂಗಗಳ ದೇವಾಲಯಗಳೂ ನಿರ್ಮಾಣವಾಗಿರಬೇಕು.

ಕ್ರಿ. ಶ. 5 ನೆ ಶತಮಾನದಲ್ಲಿ ಬುದ್ಧ ಧರ್ಮ ಉದಯವಾಗಿ ಪ್ರಭಲವಾಗಿ ಅಶೋಕನಂತಹ ಸಾಮ್ರಾಟರ ಆಶ್ರಯ ದೊರಕಿ ಹೊರ ಜಗತ್ತಿಗೂ ಕಾಲಿಟ್ಟಿತು. ಬೌದ್ಧರು ಧರ್ಮ ಪ್ರಚಾರಕ್ಕಾಗಿ ಸಂಘಗಳನ್ನು ಸ್ಥಾಪಿಸಿದರು. ಸನ್ಯಾಸಿಗಳಾದ ಭಿಕ್ಷುಗಳು ಧರ್ಮ ಪ್ರಚಾರ ಹಾಗೂ ಪೂಜೆಗಾಗಿ ಚೈತ್ಯಗಳನ್ನು [ಬುದ್ಧ ದೇವಾಲಯ ಕಟ್ಟಿಸಿದರು. ಅದಕ್ಕೆ ಹೊಂದಿಕೊಂಡೇ ವಿಹಾರ (ಮಠ) ಗಳನ್ನು ಕಟ್ಟಿಸಿ ಅಲ್ಲಿ ನೆಲಸಿದರು. ಸಂಘಾರಾಮಗಳನ್ನು ಕಟ್ಟಿಸಿದರು. ಅಲ್ಲಿ ಧರ್ಮದ ಶಿಕ್ಷಣ–ದೀಕ್ಷೆ ನೀಡತೊಡಗಿದರು. ಅವೇ ಮುಂದೆ ಜಗತ್ಪ್ರಸಿದ್ಧ ವಿಶ್ವವಿದ್ಯಾನಿಲಯಗಳಾದವು [ ತಕ್ಷಶಿಲಾ=ನಲಂದ-ವಿಕ್ರಮ-ಉಜ್ಜೈನಿ ]. ಬೌದ್ಧ ಧರ್ಮದ ಪ್ರಭಾವದಿಂದ ಧರ್ಮಪ್ರಚಾರ ಸಾಧನಗಳಾದ ಸಂಘ-ಸಂಸ್ಥೆ-ದೇವಾಲಯ–ಮಠಗಳ ನಿರ್ಮಾಣ ಜೈನರಲ್ಲೂ ( ಶ್ರಮಣರ ಸಂಘ-ಸಂಸ್ಥೆ ) ವಿಪುಲವಾಗಿ ನಡೆಯಿತು. ಅಷ್ಟೇ ಅಲ್ಲ, ಹಿಂದೂಗಳಲ್ಲಿ ಈ ಪದ್ಧತಿ ವ್ಯಾಪಕವಾಗಿ ನಡೆಯಿತು. ಹಿಂದೂ ಧರ್ಮಕ್ಕೆ ಬೌದ್ಧ ಧರ್ಮ ನೀಡಿದ ಕಾಣಿಕೆ ಇದಾಗಿದೆ. ಶೈವ - ವೈದಿಕ ಜೈನ ಸಂಪ್ರದಾಯದವರೆಲ್ಲ ದೇವಾಲಯಗಳನ್ನು ನಿರ್ಮಿಸಿದರು. ಈ ಕಾಲದಲ್ಲಿ ಶಿಲ್ಪ ಕಲೆಗೆ ಹೆಚ್ಚು ಪ್ರೋತ್ಸಾಹ ದೊರಕಿತು. ದೇವಾಲಯಗಳು ಸಾರ್ವಜನಿಕ ಕ್ಷೇತ್ರಗಳಾದವು. ಸಾಮಾಜಿಕ-ಸಾಂಸ್ಕೃತಿಕ ಕೇಂದ್ರಗಳಾಗಿ ಜನಗಳಿಗೆ ಶಾಂತಿ-ಸಮಾಧಾನ ನೀಡುವ ಅಧ್ಯಾತ್ಮ ಸಂಸ್ಥೆಗಳಾದವು. ಸಮಾಜದ ಸಂಘಟನೆ ದೈವಭಕ್ತಿ ಪ್ರಕಟಣೆಗೆ ಸಾಧನಗಳಾದವು. ದೇವಾಲಯಗಳ ಅಂಗವಾಗಿ ಬಂದ ಯತಿ-ಸನ್ಯಾಸಿ ಜಂಗಮರ ನಿವಾಸಗಳು ಮಠಗಳಾದವು.



ಪ್ರಾಚೀನ ಶೈವ ಧರ್ಮದ ಶಾಖೆಗಳಾದ ಕಾಪಾಲಿಕ ಕಾಳಾಮುಖ-ಭೈರವ ಪಾಶುಪತಗಳು ವೀರಶೈವದಲ್ಲಿ ಸಮಾವೇಷವಾಗಿ ಶ್ರೀಶೈಲ-ಕೇದಾರ-ಉಜ್ಜಯಿನಿ-ಕಾಶಿ-ಕೊಲ್ಲಿಪಾಕಿಯಂತಹ ಪ್ರಸಿದ್ಧ ಶೈವ ಕ್ಷೇತ್ರಗಳಲ್ಲಿ ವೀರಶೈವ ಆಚಾರ್ಯರು ನೆಲಸಿ ವೀರಶೈವ ತತ್ವಪ್ರಚಾರಕ್ಕಾಗಿ ಪಂಚ ಆಮ್ನಾಯ ಪೀಠಗಳನ್ನು ಭರತ ಖಂಡದಲ್ಲಿ ಸ್ಥಾಪಿಸಿದರು ಎಂದು ತೋರುತ್ತದೆ. ನಂತರ 7ನೆಯ ಶತಮಾನದ ತರುವಾಯ ಪ್ರಚ್ಛನ್ನ ಬುದ್ಧನೆಂದು ಬಿರುದ ಪಡೆದ ಆಚಾರ್ಯ ಶಂಕರರು ಭರತ ಖಂಡದಲ್ಲಿ ನಾಲ್ಕು ಮಠಗಳನ್ನು ಅದ್ವೈತ ತತ್ವಪ್ರಚಾರಕ್ಕಾಗಿ ಕಟ್ಟಿಸಿದರು [ ಪುರಿ, ಜಗನ್ನಾಥ, ಶೃಂಗೇರಿ, ದ್ವಾರಕಾ ] ದ್ವೈತ ವಿಶಿಷ್ಟಾದ್ವೈತ ತತ್ವಪ್ರಚಾರಕ್ಕಾಗಿ ಆಚಾರ್ಯ ಮಧ್ವ ರಾಮಾನುಜರೂ [ ಉಡುಪಿ ಮೇಲುಕೋಟೆಗಳಲ್ಲಿ ] ಮಠಗಳನ್ನು ಸ್ಥಾಪಿಸಿದರು. ಮಠಗಳೆಂದರೆ ಸಂನ್ಯಾಸಿಗಳು, ಜಂಗಮರು, ಯತಿಗಳು ವಾಸಮಾಡುತ್ತಾ ತಮ್ಮ ತಮ್ಮ ಸಿದ್ಧಾಂತಗಳ ಪಾಠಪ್ರವಚನ ಮಾಡುತ್ತಿರುವ ಸ್ಥಳ, ಮಠಶ್ಛಾತ್ರಾದಿನಿಲಯಃ ಎಂದು ಅಮರಸಿಂಹನೂ ಹೇಳುತ್ತಾನೆ. ಅಲ್ಲಿ ವಿದ್ಯಾರ್ಥಿಗಳೂ ಇರುತ್ತಿದ್ದರು; ಹೀಗೆ ದೇವಾಲಯಗಳ ಅವಿಭಾಜ್ಯ ಅಂಗವಾಗಿ ಮಠಗಳು ಹುಟ್ಟಿದವು. ದೇವಾಲಯಗಳಿಗೆ ದೊರೆಯುತ್ತಿದ್ದ ಗೌರವ ಮನ್ನಣೆಯನ್ನು ಕ್ರಮೇಣ ಮಠಗಳು ಆಕ್ರಮಿಸಿಕೊಂಡವು. ದೇವಾಲಯದ ಸ್ಥಾನಪತಿಗಳು ಮಠಾಧಿಪತಿಗಳಾದರು. ನಂತರ ಮಠಗಳು ಸಾರ್ವಜನಿಕರಿಂದ ಆಸ್ತಿ-ದತ್ತಿ-ದಾನ ರೂಪದಲ್ಲಿ ಪಡೆದು ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳಾದವು. ಮಠಗಳಿಗೆ ದತ್ತಿ-ದಾನ ಮಾಡುವುದು ಪುಣ್ಯವೆಂದು ಜನರು ಭಾವಿಸಿದರು. ಮಠಗಳು ಬೆಳೆದವು ಗುರು- ಜಂಗಮ- ಯತಿ- ಆಚಾರ್ಯರಿಂದ ಧಾರ್ಮಿಕ ತತ್ವಗಳ ಬೋಧನೆ ಸಾಗಿತು. ಜ್ಞಾನ-ಅನ್ನ ದಾಸೋಹ ನಡೆದು ಬಂದವು. ವಿದ್ಯಾರ್ಥಿಗಳು ಆಶ್ರಯ ಪಡೆದರು. ವಿದ್ಯಾ ಪ್ರಸಾರದ ಹೊಣೆ ಹೊತ್ತಿದ್ದ ದೇವಾಲಯಗಳು ತಮ್ಮ ಜವಾಬುದಾರಿಯನ್ನು ಮಠಗಳಿಗೆ ಒಪ್ಪಿಸಿದವು. ನಮ್ಮ ದೇಶದಲ್ಲಿ ಬಹಳ ಹಿಂದಿನ ಕಾಲದಿಂದಲೂ ಪ್ರತಿ ಹಳ್ಳಿಯಲ್ಲೂ ದೇವಾಲಯದಲ್ಲೇ ಶಾಲೆಗಳು ನಡೆಯುತ್ತಿದ್ದವು ಅವುಗಳನ್ನು ಶಾಲೆ ( ಸಾಲಿ ) ಮಠಗಳೆಂದೇ ಕರೆಯುತ್ತಿದ್ದರು.

ಪ್ರಸಿದ್ಧ ಇತಿಹಾಸ ತಜ್ಞರಾದ ಅಲ್ಟೇಕರರು ಹೀಗೆ ಹೇಳುತ್ತಾರೆ.

" ದೇವಸ್ಥಾನಗಳನ್ನು ಸ್ಥಾಪಿಸುವ ಸಂಪ್ರದಾಯವು ಅಶೋಕನಿಗಿಂತ ಈಚಿನದೆಂದು ಕಾಣುತ್ತದೆ. ಬಹುಜನರು ನೆರೆಯುತ್ತಿದ್ದ ಶ್ರೌತ ಯಜ್ಞಗಳ ಸ್ಥಾನದಲ್ಲಿ ಇವು ಕಾಣಿಸಿಕೊಂಡವು. ಬೌದ್ಧರ ಭವ್ಯ ದೇವಾಲಯಗಳನ್ನು (ಚೈತ್ಯಗಳು) ಬಿಹಾರಗಳನ್ನು (ಮಠಗಳು) ನೋಡಿದ ಹಿಂದುಗಳ ಮನಸ್ಸಿನಲ್ಲಿ ಸಾರ್ವಜನಿಕ ಆರಾಧನಾ ಕೇಂದ್ರಗಳನ್ನು ಸ್ಥಾಪಿಸುವ ಇಚ್ಛೆಯಾಗಿರಬೇಕು. ದೇವಸ್ಥಾನಗಳು - ಸಾರ್ವಜನಿಕ ಪೂಜಾಕೇಂದ್ರಗಳೆಂದು ಮುಂದೆ ಪರಿಗಣಿತವಾದವು " ಎಂದು ಅಭಿಪ್ರಾಯಪಡುತ್ತಾರೆ.

ಕರ್ನಾಟಕವನ್ನು ಗಮನಿಸಿ ಹೇಳುವುದಾದರೆ ಕರ್ನಾಟಕದಲ್ಲಿ ಕ್ರಿ. ಶ. 12ನೇ ಶತಮಾನದ ನಂತರ ಶಿವ ಶರಣರ ಆಂದೋಲನದ ಪ್ರಭಾವ ಕರ್ನಾಟಕ ಆಂಧ್ರ-ತಮಿಳುನಾಡುಗಳವರೆಗೆ ಹಬ್ಬಿಹರಡಿತು. (ವಿಶೇವಾಗಿ ಕರ್ನಾಟಕದಲ್ಲಿ) ಇದರ ಪರಿಣಾಮವಾಗಿ ದೇವಾಲಯಗಳ ನಿರ್ಮಾಣ ಕಡಿಮೆಯಾಯಿತು. ಎಷ್ಟೋ ಶೈವ ದೇವಾಲಯಗಳು ಕಾಲಕ್ರಮೇಣ ಮಠಗಳಾಗಿ ಪರಿವರ್ತನೆ ಹೊಂದಿದವು. ಅಲ್ಲಿ ಜ್ಞಾನಿಗಳೂ - ತಪಸ್ವಿಗಳು-ಕ್ರಿಯಾಮೂರ್ತಿಗಳು ಆದ ಜಂಗಮರು ನೆಲಸಿದರು. ಕನಾಟಕದಲ್ಲಿ ವೀರಶೈವ ಮಠಗಳ ಸಂಖ್ಯೆ 200 ಕ್ಕೂ ಹೆಚ್ಚೆಂದು ತಿಳಿದು ಬಂದಿದೆ. ಹೀಗೆ ಭಾರತದಲ್ಲಿ ದೇವಾಲಯಗಳೂ ಮಠಗಳೂ ನಡೆದು ಬಂದ ದಾರಿಯನ್ನು ಗುರುತಿಸಬಹುದಾಗಿದೆ.

ಗುರುಂ ಶರಣಂ ಗಚ್ಛಾಮಿ। ಲಿಂಗಂ ಶರಣಂ ಗಚ್ಛಾಮಿ।
ಜಂಗಮಂ ಶರಣಂ ಗಚ್ಛಾಮಿ ॥

* * * * * *



## ಪಂಚ ವಿಕಾರಗಳು ನೀಡುವ ಫಲ

—ಎಸ್. ಕೃಷ್ಣಪ್ಪ

ಕಾಮಿಾ ಪುರುಷನು ಜಗತ್ತಿನೊಳು
ತಾ, ಕಾಮ ಕಠಾರಿಯ ಚಲಾಯಿಸಿ,
ದುಃಖವ ಭೋಗಿಪ' ಆದಿ, ಮಧ್ಯ –
ಅಂತ್ಯದೊಳಾಗಿ ನರಕವಾಸಿ— ||೧||

ಕ್ರೋಧೀ ಜನರಿಗೆ ಸುಖವೆಲ್ಲಿರುವುದು
ಕ್ಲೇಶದ ವಿಷವನು ಹರಡುತಿರೇ,
ಕ್ರೋಧ ಜ್ವಾಲೆಗೆ ಆಹುತಿಯಾಗಿ
ಜನ್ಮ ಜನ್ಮಾಂತರ ಸುಡುತಲಿರೇ.... ||೨||

ಲೋಭೀ ನರನು ಕಂಗಾಲಾಗೀ
ದುಃಖವ ಪಡೆವನು ದುಃಖ ನೀಡಿ,
ನಿರ್ಲೋಭಿಗಾದರೋ ಸದಾಸುಖವನು
ಪ್ರತಿಕ್ಷಣ ನೀಡುವ ಈಶ್ವರನು.... ||೩||

ಮೋಹದ ಬಂಧನ ಕಠಿಯದು ಬಹಳ
ಮೋಹದೊಳೆಲ್ಲರ ಶ್ವಾಸವಿದೇ
ಸದಾಶಿವನೊಳು ಸ್ನೇಹವಿರುತಿರೇ
ದುಃಖದ ನೇಣು ಮುರಿಯುವುದು..... ||೪||

ದೇಹಾಭಿಮಾನವು ನರನನು ಇಂದು
ನರಕದ ದ್ವಾರಕೆ ಎಳೆಯುತ್ತಿದೇ,
ದೇಹಾಭಿಮಾನವ ತೊರೆಯುತಲಿರಲು
ಉಳಿದ ವಿಕಾರವು ನಶಿಸುವುದು... ||೫||

ಮನ, ವಚನ, ಕರ್ಮದಿ ಶ್ರೇಷ್ಠನು
ಉತ್ತಮ ನರನೆಂದೆನಿಸುವನು
ಮೂರರ ಜ್ಞಾನವು ಸದಾ ಇರುತ್ತಿರೇ
ವೈಕುಂಠಧಾಮವ ಸೇರುವನು.... ||೬||

## ಜ್ಯೋತಿಯಾಗಿ ಬಾ

—ಜೆ. ಬಿ. ಲಿಂಗರಾಜು

ಮರಳಿ ಬಾ ಬೆಳಗಿಸು ಜಗದ ಜ್ಯೋತಿಯ
ಮಹಾಯೋಗಿ ಮಹಾತ್ಯಾಗಿ ಜಗಜ್ಯೋತಿಯೆ ।

ಶಿವಾನುಭವ ಮಂಟಪದ ಮಹಾಶರಣ ಬಾ
ಶಿವನನಾರಾಧಿಸಿದ ಮಹಾಶರಣ ಬಾ
ವಚನ ವಾಙ್ಮಯಗಳ ಪ್ರಭೆಯ ಚೆಲ್ಲು ಬಾ
ಮಾನವಗೆ ನೀತಿಮಯ ಸುಧೆಯ ಸೊಲ್ಲುಬಾ ॥

ತಪೋಭೂಮಿ ಭಾರತದಿ ಜನ್ಮತಳೆದು ಬಾ
ಜ್ಯೋತಿಯಲ್ಲೊದಗಿದ ಜ್ಯೋತಿಯಾಗಿ ಬಾ
ನಾಡಿನಿರುಳ ಕಳೆದು ಕಲ್ಯಾಣವೆನಿಸು ಬಾ
ಆಚಾರ ಧರ್ಮಸಾರ ಧಾರೆ ಹಂಸು ಬಾ ॥

ಜ್ಞಾನದಾನಗೈದು ಜಗವ ಉದ್ಧರಿಸು ಬಾ
ಕಾಯಕದ ಕೈಲಾಸವೆನಿಸು ಉದ್ಭವಿಸು ಬಾ
ನೀತಿ ನೆಲೆಯ ಬೋಧಿಸಿ ಗುರುವೆ ನಿಲ್ಲು ಬಾ
ಭೇದ ಭಾವ ಬೇಧಿಸುವ ವರವ ಚೆಲ್ಲು ಬಾ ॥

ಜ್ಞಾನಗಂಗೆ ಧರಗೆ ಹರಿಸಿ ಬೆಳಗುತ ಬಾ
ಕೂಡಲ ಸಂಗಮದಿ ಜಂಗಮನೆ ಬಾ
ಶಿವನ ಶಿರದಿ ಮುಡಿಸಿದ ಹೂವಾಗಿ ಬಾ
ಮಾನವರೆದೆಯೊಳು ಚೇತನವನು ತಾ ॥

ಹೊಮ್ಮಿಸುತ ಹೊಸಕಳೆಯ ಧರ್ಮಸಾರು ಬಾ
ಜಗದ ಮನೆಯೊಳವತರಿಸಿ ಜ್ಯೋತಿಯಾಗಿ ಬಾ
ಚಿಮ್ಮಿಸುತ ಚೇತನವ ಪೂರ್ಣಗೊಳಿಸು ಬಾ
ಯುಗದ ಕೊಳೆಯ ಕನಿಕರಿಸಿ ಕೊಲ್ವ ಖ್ಯಾತಿ ಬಾ ॥



## ನಿರ್ಜೀವಿ ತಲೆಬುರುಡೆಗಳ ಭಯಂಕರ ಚೀತ್ಕಾರ !

—ಪ. ರಾಮಕೃಷ್ಣ ಶಾಸ್ತ್ರಿ

ಸಾಮರಸೆಟ್‌ನ ನಿವಾಸಿಯಾಗಿದ್ದ ಥಿಯೋಫಿಲಸ್ ೧೬೭೦ ರಲ್ಲಿ ಸತ್ತ. ಅವನು ತನ್ನ ಮುಂಡವನ್ನು ಮಾತ್ರ ಸಮಾಧಿ ಮಾಡಬೇಕೆಂದೂ ತಲೆಬುರುಡೆಯನ್ನು ಒಂದು ಮರದ ಪೆಟ್ಟಿಗೆಯಲ್ಲಿ ಕಾದಿರಿಸಬೇಕೆಂದೂ ಮೃತ್ಯುಪತ್ರದಲ್ಲಿ ತಿಳಿಸಿ ಆ ಮರದ ಪೆಟ್ಟಿಗೆಯನ್ನು ತಯಾರಿಸಲು ಅವಶ್ಯವಿರುವ ಹಣವನ್ನು ಉಳಿಸಿದ್ದ. ಅದರಂತೆ ಅವನ ಬಂಗಲೆಯ ಹೆಬ್ಬಾಗಿಲಿನಲ್ಲಿ ಅವನ ತಲೆಬುರುಡೆಯನ್ನು ಪೆಟ್ಟಿಗೆಯಲ್ಲಿಡಲಾಯಿತೆಂದು ಸನಿಹದ ಚಿಲ್ಟರ್ನ್ ಕ್ಯಾಂಟೆಲೋ ಚರ್ಚಿನಲ್ಲಿರುವ ದಾಖಲೆ ಪುಸ್ತಕಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಅನಂತರ ಆ ಬಂಗಲೆಗೆ ಬಾಡಿಗೆಗೆ ಬಂದ ಕೆಲವರು ಅವನ ಆಶಯವನ್ನು ಕಡೆಗಣಿಸಿ, ಆ ತಲೆಯನ್ನು ಹೂಳಲೆಳಸಿದರಂತೆ.

ಆಗ ನಿರ್ಜೀವವಾದ ಆ ಎಲುಬಿನ ಕಪಾಲ ಭಯಂಕರ ಧ್ವನಿಯಲ್ಲಿ ಅರಚತೊಡಗಿತು. ಅದರ ಚೀರಾಟದ ಧ್ವನಿ ಸುತ್ತಮುತ್ತಲೂ ಹಬ್ಬಿದಾಗ ಈ ಕೆಲಸಕ್ಕೆ ಯತ್ನಿಸಿದವರು ಭಯಭೀತರಾಗಿ ಓಡಿಹೋದರು. ಮುಂದೆ ಕೆಲವು ಸಮಯದ ಮೇಲೆ ಅವರು ಈ ಪ್ರಯತ್ನಕ್ಕಿಳಿದಾಗಲೂ ತಲೆಬುರುಡೆ ಇದೇ ರೀತಿ ಅರಚತೊಡಗಿತು. ೧೯೫೨ ರಲ್ಲಿ ಅದನ್ನು ಮತ್ತೆ ಹೂಳಲೆಳಸಿ ಹೊಂಡ ತೋಡುವಾಗ ಉಕ್ಕಿನ ಗುದ್ದಲಿಯೇ ತುಂಡಾಗಿ ಹೋದಕಾರಣ ಮುಂದೆ ಈ ಕೆಲಸಕ್ಕೆ ತಾವು ಯತ್ನಿಸಲಾರೆವೆಂದು ಪಣ ತೊಟ್ಟರು. ಹದಿನೆಂಟನೆಯ ಶತಮಾನದಲ್ಲಿ ಥಿಯೋಫಿಲಸ್‌ನ ಸಮಾಧಿಯನ್ನು ಅಗೆದು ನೋಡಿದ್ದರು. ಸಮಾಧಿಯಲ್ಲಿದ್ದ ಅವನ ಮುಂಡದ ಎಲುಬುಗಳಿಂದ ಯಾವ ಧ್ವನಿಯೂ ಕೇಳಬರಲ್ಲಿಲ್ಲ.

ಹೀಗೆ ಚೀರಾಡುವ ತಲೆಬುರುಡೆಗಳ ಬಗೆಗೆ ಹಲವಾರು ಸತ್ಯ ಸಂಗತಿಗಳು ಪ್ರಚಲಿತವಾಗಿವೆ. ಕೆಲವು ಬುರುಡೆಗಳು ಚೀರಿದ್ದರೂ ಅವು ಯಾರವೆಂಬುದು ತಿಳಿಯದ ಕಾರಣ ಅಷ್ಟೊಂದು ಬೆಳಕಿಗೆ ಬಂದಿಲ್ಲ. ವೈಜ್ಞಾನಿಕ ಕಾಲದ ಈ ವಿಚಿತ್ರ ವಿಚಾರಗಳ ರಹಸ್ಯ ಬಿಡಿಸಲು ವಿಜ್ಞಾನಿಗಳಿಗೂ ಸಾಧ್ಯವಾಗಿಲ್ಲ.

೧೬೮೫ರಲ್ಲಿ ಇಂಗ್ಲೆಂಡಿನಲ್ಲಿ ಮೊನಮೊಥ್ ಬಂಡಾಯ ನಡೆಯಿತು. ಅದರಲ್ಲಿ ಸಾವಿರಕ್ಕೂ ಹೆಚ್ಚು ಮಂದಿ ವಿದ್ರೋಹಿಗಳು ಭಾಗವಹಿಸಿದ್ದರು. ಡೊರಸೆಂಟ್ ಜಿಲ್ಲೆಯ ಬೆತಿಸ್ಕೊಂಬ್‌ನಲ್ಲಿ ಜಹಗೀರದಾರನಾಗಿದ್ದ ಪ್ಯೂರಟನ್ ಜಾನ್‌ಪಿನೇ ತನ್ನ ಮಕ್ಕಳೊಂದಿಗೆ ಈ ಬಂಡಾಯದ ಮುಖಂಡತ್ವ ವಹಿಸಿದ್ದ. ವಿದ್ರೋಹಿಗಳೆಲ್ಲ ಸೆರೆ ಸಿಕ್ಕಿ, ಕೆಲವರಿಗೆ ಗಲ್ಲು; ಹಲವರಿಗೆ ಗಡಿಪಾರು ಶಿಕ್ಷೆ ವಿಧಿಸಲ್ಪಟಿತ್ತು. ಜಾನ್ ಪಿನೇಯ ಕಿರಿ ಮಗನಿಗೆ ದೇಹ ಬಹಿಷ್ಕಾರ ಶಿಕ್ಷೆಯಾಗಿತ್ತು. ಅವನು ವೆಸ್ಟ್ ಇಂಡೀಸ್ ದ್ವೀಪಕ್ಕೆ ಹೋಗಿ ಅಲ್ಲಿ ಒಬ್ಬ ನಿಗ್ರೋ ಗುಲಾಮನೊಂದಿಗೆ ವ್ಯವಸಾಯ ಮಾಡಿಕೊಂಡಿದ್ದ.

ಮುಂದೆ ಈ ಅಪರಾಧಿಯನ್ನು ಸರಕಾರ ಕ್ಷಮಿಸಿತು. ಅವನು ಆ ಗುಲಾಮನೊಂದಿಗೆ ಊರಿಗೆ ಹಿಂತಿರುಗಿದ. ಆದರೆ ಬೆತಿಸ್ಕೊಂಬಿನ ಶೀತ ಹವೆ ಒಗ್ಗದೆ ಗುಲಾಮ ನ್ಯೂಮೋನಿಯಾಕ್ಕೆ ತುತ್ತಾದ. ತನ್ನ ಶವವನ್ನು ಆಫ್ರಿಕಾಕ್ಕೆ ಕಳುಹಿಸಬೇಕು, ಅದು ಅಸಾಧ್ಯವಾದರೆ ವೆಸ್ಟ್ ಇಂಡೀಸಿಗೆ ಕಳುಹಿಸಬೇಕೆಂದು ಕೋರಿ ಆತ ಪ್ರಾಣಬಿಟ್ಟ.. ಆದರೆ ಅವನ ಕೋರಿಕೆಯನ್ನು ನೆರವೇರಿಸಲು ಸಾಧ್ಯವಾಗದೆ ಮುಂಡವನ್ನು ಅಲ್ಲೇಹೂಳಿ ರುಂಡವನ್ನು ಹೆಬ್ಬಾಗಿಲಿನ ಬಳಿ ಒಂದು ಅಲಂಕೃತ ಕಪಾಟಿನಲ್ಲಿರಿಸಿದರು.

ಒಂದು ದಿನ ಮನೆಯ ಕೆಲಸದವಳು ಕಸ ಗುಡಿಸುವಾಗ ಕೈ ತಪ್ಪಿನಿಂದ ಆ ತಲೆಬುರುಡೆ ಕೆಳಗುರುಳಿತು. ತಕ್ಷಣವೇ ಅದು ದೊಡ್ಡ ಧ್ವನಿಯಲ್ಲಿ ಚೀರಲಾರಂಭಿಸಿತು. ಕೊನೆಗೆ ಆ ಬುರುಡೆಯನ್ನು ಯಥಾಸ್ಥಾನದಲ್ಲಿರಿಸಿದ ಮೇಲೆಯೇ ಆ ಚೀರಾಟ ನಿಂತಿತು. ಮುಂದೆ ಆ ಮನೆಯನ್ನು ಮಾರಾಟಮಾಡಬೇಕಾಯಿತು. ಹೊಸ ಮಾಲೀಕರು ಈ ತಲೆಬುರುಡೆಯನ್ನು ನೋಡಿ. ಅಸಹ್ಯಗೊಂಡು ಅದನ್ನು ಹೂಳಲು ಹೊಂಡದಲ್ಲಿಟ್ಟ ಕೂಡಲೇ ಅದು ಭಯಂಕರವಾಗಿ ಚೀರತೊಡಗಿತು. ಆ ಸಲ ಆ

ಪ್ರಯತ್ನವನ್ನು ಅವರು ಕೈ ಬಿಟ್ಟರಾದರೂ ಮುಂದೊಮ್ಮೆ ಅದರ ಚೀರಾಟವನ್ನು ಗಣಿಸದೆ ಹೂಳಿದರು. ಅದರಿಂದಾಗಿ ವಿಪತ್ಪರಂಪರೆಗಳುಂಟಾದವು. ಲೆಕ್ಕವಿಲ್ಲದಷ್ಟು ಜಾನುವಾರುಗಳು ಅಸುನೀಗಿದವು. ಬೆಳೆ ಕ್ರಿಮಿಗಳಿಗೆ ತುತ್ತಾಯಿತು.

ಆ ಮೇಲೆ ತಲೆಬುರುಡೆಯನ್ನು ಮತ್ತೆ ಹೊರ ತಂದು ಆ ಕವಾಟನಲ್ಲಿ ಇರಿಸುವುದು ಅನಿವಾರ್ಯವಾಯಿತು.

ಇನ್ನೊಂದು ಚೀರಾಟದ ಬುರುಡೆ ಲಂಕಾಷೈರಿನ ವಾರ್ಡ್‌ಲೆ ಹಾಲ್‌ನಲ್ಲಿರುವ 'ವಿವಾದಾಸ್ಪದ' ತಲೆಬುರುಡೆ. ವಾರ್ಡ್‌ಲೆ ಹಾಲ್ ಎರಡನೆಯ ಚಾರ್ಲ್ಸ್ ದೊರೆಯ ಕಾಲಕ್ಕೆ ಸೇರಿದ ಬಂಗಲೆ. ಅದರ ಯಜಮಾನ ರೋಜರ್ ಡೋನೇ. ಅವನು ಲಂಡನ್ ಸೇತುವೆಯ ಪಹರೆಯವರ ಮೇಲೆ ಒಮ್ಮೆ ವಿನಾಕಾರಣ ಕೈಮಾಡಿದಾಗ ಪಹರೆಯವರು ಅವನನ್ನು ಕೊಂದರು. ಅವನ ತಲೆಬುರುಡೆಯನ್ನು ಒಂದು ಪೆಟ್ಟಿಗೆಯಲ್ಲಿಟ್ಟರು ಪೆಟ್ಟಿಗೆ ರೋಜರನ ಸಹೋದರಿ ಪೆನಿಲೋಪಳ ಬಳಿಗೆ ತಲುಪಿತು. ಆಕೆ ಅದನ್ನು ನೋಡಿ ದುಃಖತಪ್ತಳಾಗಿ, ತನ್ನ ಮನೆಯ ಸಭಾಂಗಣದ ಉನ್ನತ ಪ್ರದೇಶದಲ್ಲಿ ತಲೆಬುರುಡೆಯಲ್ಲಿ ಅಲಂಕರಿಸಿಟ್ಟಳು. ಮುಂದೆ ಕೆಲವರು ಅದನ್ನು ಹೂಳಲು ಯತ್ನಿಸಿದಾಗ ತಲೆ ಬುರುಡೆಯ ಕರ್ಕಶ ಚೀತ್ಕಾರದಿಂದ ಹೆದರಿ ನಡುಗಿ ಆ ಕೆಲಸವನ್ನೇ ಕೈ ಬಿಟ್ಟರು-ಎಂಬುದು ಒಂದು ಕಥೆ.

ಆದರೆ ಆ ತಲೆಬುರುಡೆ ರೋಜರಾ ಡೋನೇಯದಲ್ಲ; ಅದು ಕೆಥೊಲಿಕ್ ಪಾದ್ರಿ ಆಂಡ್ರ್ಯೂ ಬಾರ್ಲೋನದು ಎಂಬ ಹೇಳಿಕೆ ಇವೆ. ರೋಜರ್ ಡೋನೆಯ ಶವ ಪೆಟ್ಟಿಗೆಯನ್ನು ತೆರೆದು ನೋಡಿದಾಗ ಶವಕ್ಕೆ ತಲೆ ಇದ್ದಿತಂತೆ !

ಹೀಗೆ ವಿವಾದಾಸ್ಪದವೆನಿಸಿದ ಬುರುಡೆ ಪಾದ್ರಿಯದು ಹೌದಾದರೆ ಅದಕ್ಕೂ ಒಂದು ಕಥೆಯಿದೆ. ಬಾರ್ಲೋ ಮತ್ತು ರೋಜರ್ ಡೋನೇಯ ಕುಟುಂಬಗಳು ತುಂಬ ಸ್ನೇಹದಿಂದಿದ್ದವು. ೧೬೪೧ ರ ಏಪ್ರಿಲ್ ೨೫ ರಂದು ಆಂಡ್ರ್ಯೂ ಬಾರ್ಲೋ ಪಾದ್ರಿಯಾಗಿದ್ದ ಚರ್ಚಿನ ಮೇಲೆ ಪ್ರಾಟೆಸ್ಟೆಂಟ್‌ಗಳಿಗೆ ಕೆಥೊಲಿಕರನ್ನು ಕಂಡರೇ ಆಗುತ್ತಿರಲಿಲ್ಲ. ಈ ದಾಳಿಯಲ್ಲಿ ಚರ್ಚಿನಲ್ಲಿದ್ದ ಉಳಿದ ಯಾರಿಗೂ ಹಾನಿ ಮಾಡಬಾರದೆಂಬ ಶರತವೊಡ್ಡಿ ಬಾರ್ಲೋ ಅವರಿಗೆ ಶರಣಾಗತನಾದ. ದಾಳಿಗಾರರು ಅವನ ರುಂಡವನ್ನು ಮುಂಡದಿಂದ ಬೇರ್ಪಡಿಸಿ ಮ್ಯಾಂಚೆಸ್ಟರಿನ ಹಳೆಯ ಚರ್ಚೊಂದರ ಗೋಪುರದಲ್ಲಿ ತೂಗ ಹಾಕಿದರು.

ಆ ಪಾದ್ರಿ ತನ್ನ ಸ್ನೇಹಿತನಾದಕಾರಣ ರೋಜರ್‌ಡೋನೇ ಅವನ ತಲೆಯನ್ನು ತಂದು ತನ್ನ ಮನೆಯಲ್ಲಿ ಇರಿಸಿಕೊಂಡನೆಂದೂ ಮುಂದೆ ಪೆನಿಲೋಪಳ ಕೈ ಸೇರಿದ್ದ ಅದು ಚೀರಾಡುತಿತ್ತೆಂದೂ ಕೆಲವರ ಹೇಳಿಕೆ:

ಸತ್ತು ಶತಮಾನಗಳೇ ಕಳೆದರೂ ನಿರ್ಜೀವ ತಲೆಬುರುಡೆ ಯಾಕೆ ಚೀರುತ್ತಿತ್ತೋ ಹೇಗೆ ಚೀರುತ್ತಿತ್ತೋ ಹೇಳಲು ಇನ್ನೂ ಸಾಧ್ಯವಾಗಿಲ್ಲ. —

## ನಿಷ್ಕಾಮ ಕರ್ಮ

ನನ್ನ ಹೊಲವನು ಮೊದಲು ಹಸನಗೈದು
ಮಾಗಿರುವ ಫಲವನ್ನು ಮೊದಲು ಕೊಯ್ದು
ಸಾಗುವೆನು ಮೌನದಲಿ ಹಿಂದೆ ಮುಂದೆ
ಕೈ ಹಿಡಿದು ನಡೆಸಪ್ಪ ನನ್ನ ತಂದೆ.

## ಬಡತನ-ಸಿರಿತನ

—ಕೆ. ವಿರೂಪಾಕ್ಷಗೌಡ.

ಬಡತನದ ಎಣ್ಣೆಯಿದೆ ಪ್ರಣತಿಯಲಿ
ಸಿರಿತನದ ಬತ್ತಿ ಅದೋ ಉರಿ ಹುರಿಯಲಿ
ಎಣ್ಣೆ ಬತ್ತುತ್ತಿದೆ ಬತ್ತಿ ಇದ್ದಂತಿದೆ
ಎಣ್ಣೆ ಬತ್ತಿರೆ ಮುಂದೆ ಬೆಳಕೆಲ್ಲಿದೆ ?



# " ಕೋಟಿ "

—ಜೆ ಶಾರದ ರಾಜಶೇಖರ್

ರಜನಿ ಮನೆಗೆ ಬಂದರೂ, ಮನ ಮಾತ್ರ ಆತನು ನುಡಿದ ನುಡಿಗಳನ್ನು ಮತ್ತೆ ಮತ್ತೆ ಮೆಲುಕು ಹಾಕುವಂತಾಯ್ತು. ಮಾತಿನ ಮೋಡಿಯನ್ನು ನೆನೆದಾಗ ಮನ ಸಂತಸವನ್ನು ವ್ಯಕ್ತಪಡಿಸುವುದಕ್ಕಿಂತ ಅಧಿಕವಾಗಿ ಭೀತಿಯೇ ಕಾಡತೊಡಗಿತು ಯಾರೊಡನೆಯೂ ಮಾತನಾಡಲು ಮನಸ್ಸಿಲ್ಲ, ಮ್ಲಾನವಾದವದನ, ನಿಸ್ತೇಜ ನೇತ್ರಗಳು, ಉತ್ಸಾಹದ ಬುಗ್ಗೆಯಂತೆ ಚಿಮ್ಮುತ್ತಿದ್ದಮನ ನಿರುತ್ಸಾಹವಾಗಿ, ಮುದುಡಿ ಮೂಲೆಸೇರಿತ್ತು; ಕೈ ಕಾಲುಗಳಲ್ಲಿ ಶಕ್ತಿ ಕುಂದಿದ ಅನುಭವ, ಭೀತಿಯ ತೆರೆಮಸಕು ಮಸುಕಾಗಿ ಹೆಡೆಯಾಡಿಸುತ್ತಿತ್ತು. ಮನೆ ಕೆಲಸಗಳನ್ನು ಸಹ ಮಾಡಲಾಗದೆ ತಲೆ ನೋವಿನ ಸೋಗು ಹಾಕಿ ಮಲಗಿದಳು, ಮಲಗಿದಾಕ್ಷಣ ಮನದ ಬೇಸರ ಪರಿಹಾರವಾದೀತೇ ? ಮನದ ಯೋಜನಾಲಹರಿ ಹರಿಯುತ್ತಲೇ ಇತ್ತು. ಶರೀರಮಾತ್ರ ಸುಮ್ಮನೆ ಬಿದ್ದುಕೊಂಡಿತ್ತು ಮರದತುಂಡಿನಂತೆ.

ಪುಟ್ಟಕುವರಿ ತಾರಾ ತಾಯಿಯ ಬಳಿಗೆ ಬಂದು ಮೆಲ್ಲನೆ, ತಾಯಿ ಮುಖದ ತುಂಬಾ ಹೊದಿಕೆಯನ್ನು ಸರಿಸಿ ಯಾಕಮ್ಮ, ಮಲಗಿಬಿಟ್ಟೆ, ತಲೆ ನೋಯ್ತಾ ಇದೆಯಾ ? ಎಂದು ಕೇಳಿದಾಗ, ರಜನಿ ಅವಳ ಕುವರಿಯ ಮೇಲೂ ಸಿಟ್ಟುಗೊಂಡು ಸುಮ್ಮನೆ ಹೋಗು ತಾರಾ, ಪಕ್ಕದ ಮನೆ ರತ್ನ ಜೊತೆ ಆಟ ಆಡಿಕೊ ಹೋಗು, ನನ್ನ ಮಾತಾಡಿಸಬೇಡ ಎಂದು ಕೊಂಚ ಕಟುವಾಗಿಯೇ ನುಡಿದಳು.

ತಾರಾ ಪೆಚ್ಚು ಮೋರೆ ಹಾಕಿಕೊಂಡು, ಅಮ್ಮಾ ಯಾಕೋ ಏನೋ ಇಂದು ಕೊಪದಲ್ಲಿದ್ದಾಳೆ, ಆಫೀಸಿನಲ್ಲಿ ಅಮ್ಮನ್ನ ಯಾರಾದ್ರೂ ಏನಾದ್ರೂ ಅಂದಿರಬಹುದು, ಅದಕ್ಕೆ ಅಮ್ಮ ನನ್ನ ಮೇಲೂ ಸಿಟ್ಟುಗೊಂಡಿದಾಳೆ, ಎಂದುಕೊಂಡು ಪಕ್ಕದ ಮನೆ ರತ್ನಳ ಜೊತೆ ಆಟ ಆಡಲು ಹೊರಟಳು. ಆಟದಲ್ಲಿ ಮಗ್ನಳಾದ ತಾರಾಗೆ ಕೊಂಚ ಹೊತ್ತಿನಲ್ಲೇ ತಾಯಿಯ ನೆನಪು ಮರೆತು ಆಟದಲ್ಲಿ ತಲ್ಲೀನಳಾದಳು.

ನಾಳೆಯನ್ನು ಹೇಗೆ ಎದುರಿಸುವುದು ಎಂಬುದೇ ಅವಳಿಗೆ ಬಿಡಿಸಲಾರದ ಸಮಸ್ಯೆಯಾಗಿತ್ತು. ಹೋಗಲೆ ಬೇಡವೇ ? ಹೋಗಲೇ ಬೇಡವೇ ? ಎಂದು ಸಾವಿರಾರು ಬಾರಿ ತನಗೆ ತಾನೆ ಮನಕ್ಕೆ ಪ್ರಶ್ನೆಯನ್ನು ಹಾಕಿಕೊಳ್ಳತೊಡಗಿದಳು, ಮನ ತೂಗುಯ್ಯಾಲೆಯಂತೆ ಅತ್ತಿಂದಿತ್ತ ಇತ್ತಿಂದತ್ತ ತೂಗಾಡತೊಡಗಿತ್ತು, ತೀರ್ಪು ನೀಡಲಾಗದ ಪರಿಸ್ಥಿತಿಯಲ್ಲಿ ಬವಣೆ ಪಡಿಸುತ್ತಿತ್ತು.

ನಿನ್ನ ಭವಿಷ್ಯದ ಪ್ರಶ್ನೆ ಮುಂದಿರುವಾಗ ಆತ ಹೇಳಿದಂತೆ ಕೇಳು ಎಂದು ನುಡಿದರೆ, ಮತ್ತೊಂದು ಮನ ಮೂಲೆಯೊಳಗಿಂದ ಅಪಸ್ವರದ ನುಡಿ ನುಡಿಯತೊಡಗಿತ್ತು. ರಜನಿ ಮತ್ತೊಮ್ಮೆ ಮ್ಯಾನೇಜರ್ ನುಡಿದ ನುಡಿಯನ್ನು ಜ್ಞಾಪಿಸಿಕೊಂಡಳು. " ರಜನಿ, ನಾಳೆ ಭಾನುವಾರಾಂತ ಮನೇಲೆ ಕೂಡ ಬೇಡಿ, ಟೈಪ್ ಮಾಡೋದು ತುಂಬಾ ಇದೆ, ಬೆಳಿಗ್ಗೆ ಬೇಗ ಬನ್ನಿ " ಓಹ್! ನಾಳೆ ಭಾನುವಾರ ಮತ್ತಾರಿಗೂ ಬರಲಿಕ್ಕೆ ಹೇಳಿಲ್ಲವಂತೆ, ನನಗೆ ಮಾತ್ರ ಬರಲಿಕ್ಕೆ ಹೇಳಿದುದರ ಉದ್ದಿಶ್ಯವಾದರೂ ಏನು ? ಹೋಗದಿದ್ದರೆ ಮ್ಯಾನೇಜರ್‌ರವರ ಕೋಪಕ್ಕೆ ತುತ್ತಾಗಿ, ಕಷ್ಟಪಟ್ಟು ದೊರಕಿಸಿಕೊಂಡ ಕೆಲಸಕ್ಕೆ ನಾನಾಗಿ ನಾನು ಕಲ್ಲು ಹಾಕಿಕೊಳ್ಳಲೇ ? ಪತಿಗೆ ಬರುವ ವೇತನ ಈಗಿನ ತುಟ್ಟಿದಿನಗಳಲ್ಲಿ ಎರಡು ಹೊತ್ತಿನ ಊಟಕ್ಕೂ ಸಾಲದು, ನಾಲ್ಕು ಜನರಂತೆ ಬಾಳಬೇಕೆಂಬ ಬಯಕೆಯಿಂದಲ್ಲವೇ ನಾನು ಅವರನ್ನು ಕಾಡಿ ಬೇಡಿ ಉದ್ಯೋಗಕ್ಕೆ ಸೇರಿದ್ದು.

ಮಾತನಾಡುವ ಭರದಲ್ಲಿ ಅವರು ಪ್ರವಾಸ ಹೋಗಿರುವರೆಂದು ತಿಳಿಸಿದ್ದೇ ತಪ್ಪಾಯ್ತು, ಇನ್ನು ಮೇಲೆ ಮನೆ ವಿಷಯ ಅಪ್ಪಿ ತಪ್ಪಿಯೂ ಯಾರಿಗೂ ಹೇಳಬಾರದು. ಮ್ಯಾನೇಜರ್ ಬಳಿ ಕುಳಿತು ಕೆಲಸಮಾಡುವಾಗ ಅವ ಹಸಿದ ಕಣ್ಣುಗಳಿಂದ ನನ್ನನ್ನೇ ಘಳಿಗೆಗೊಮ್ಮೆ ಕ್ಷಣಕೊಮ್ಮೆ ನೋಡುತ್ತಿರುವನಲ್ಲಾ, ದೈವ ತನಗೆ ರೂಪ ದಯಪಾಲಿಸಿರುವುದೂ ತಪ್ಪೇ ? ಅದೇ ನನಗೆ ಶತ್ರುವಾಗಬಹುದೇ ? ಪೇಪರ್ ಕೊಡುವ ನೆಪ

ದಲ್ಲಿ ತನ್ನ ಕೈಯನ್ನು ಮೆಲ್ಲನೆ ನನ್ನ ಕೈಗೆ ತಾಗಿಸಿಯೇ ಕೊಡುತ್ತಾನೆ. ಅನ್ನಲಾರದೆ ಮನದಲ್ಲಿಯೇ ಕೋಪ ಪ್ರಕಟಿಸಿ ಸುಮ್ಮನಾಗುತ್ತೇನೆ, ಮನದಕೋಪ ಮನದಲ್ಲಿಯೇ ಹಿಂಗಿ ಹೋಗುತ್ತಿದೆ. ಪ್ರಕಟಪಡಿಸಿದರೆ ತನ್ನ ಕೆಲಸಕ್ಕೆ ಎಲ್ಲಿ ಸಂಚಕಾರ ಬಂದೀತೋ ಎಂಬ ಭೀತಿ ಈ ಭೀತಿ ನನ್ನ ನರನಾಡಿಗಳಲ್ಲೆಲ್ಲಾ ಸಂಚರಿಸಿ ನನ್ನ ಮನನ ಧೈರ್ಯವನ್ನು ದಿನದಿಂದ ದಿನಕ್ಕೆ ಕುಗ್ಗಿಸತೊಡಗಿದೆ ನಿರ್ವೀರ್ಯಳಾಗುತ್ತಿದ್ದೇನೆ. ಭಾವನೆಗಳ ತಾಕಲಾಟ ನಿಸ್ತೇಜಗೊಳಿಸುತ್ತಿವೆ.

ತಾರಾ ಆಟ ಮುಗಿಸಿ ಮನೆಗೆ ಬಂದಳು, ಅವಳಿಗೆ ಊಟಕ್ಕೆ ಬಡಿಸಿ, ತಾನೂ ಸೇರಿದಷ್ಟು ಉಂಡು ಮತ್ತೆ ಮಲಗಿದಳು. ಮ್ಯಾನೇಜರ್‌ನ ಚಿತ್ರವೇ ಕಣ್ಣುಮುಂದೆ ನಿಲ್ಲುವಂತಾಯ್ತು, ಭವ್ಯವಾದ ಆಕೃತಿ, ಗುಂಗುರುಗುಂಗುರಾದ ಅಲೆ ಅಲೆಯಾಗಿರುವ ಕೂದಲು, ವಿಶಾಲವಾದ ಎದೆ, ನೀಲಿ ಸೂಟಿನಲ್ಲಿ ಅವನ ವ್ಯಕ್ತಿತ್ವ ಮತ್ತಷ್ಟು ಸ್ಫುಟವಾಗಿ ಕಂಡಂತೆ ಪ್ರಕಟಗೊಳ್ಳತೊಡಗಿತು. ಅವನ ಬಯಕೆಯ ಬಳ್ಳಿ ಅವನ ನೋಟದಿಂದಲೇ ಅರಿಯುವ ಜಾಣ್ಮೆ ರಜನಿಯಲ್ಲುಂಟು.

ನಾಳೆ ಟೈಪ್ ಮಾಡಲು ಹೇಳಿರುವುದು ಒಂದು ನೆಪ ಎಂಬುದು ಖಚಿತವಾಗಿ ಅರಿವಾಯ್ತು. ತನ್ನ ಮೇಲಿನ ಅಧಿಕಾರಿಯ ಕೃಪಾಕಟಾಕ್ಷದ ಆಸರೆಯಲ್ಲಿ ಬಾಳಬೇಕಾದ ತನಗೆ ಅವನ ಮಾತನ್ನು ಮೀರಿ ನಡೆಯುವ ಶಕ್ತಿಯೂ ಇಲ್ಲ, ಅರಿತೂ ಅರಿತೂ ತಾನು ತಪ್ಪು ಹೆಜ್ಜೆ ಇಡುತ್ತಿರುವೆನೆ ಎಂಬ ಭೀತಿಯೂ ಆವರಿಸಿತು. ಹೆಣ್ಣು ಅಬಲೆಯೆ? ನಾಳೆ ಧೈರ್ಯದಿಂದ ಪರಿಸ್ಥಿತಿಯನ್ನು ಎದುರಿಸಬೇಕು ಎಂದು ಧೈರ್ಯ ತಂದುಕೊಂಡಳು. ಜೊತೆ ಜೊತೆಯಲ್ಲೇ ಪತಿ ನುಡಿದ ಮಾತುಗಳು ನೆನಪಾಗತೊಡಗಿತು. "ನೀನು ಏನಾದ್ರು ಹೇಳು ರಜನಿ, ನನಗೆ ಬರೋ ಸಂಬಳದಲ್ಲೇ ಹೇಗಾದ್ರು ಸಂಸಾರ ನಿರ್ವಹಿಸು, ಮುಂದೆ ಒಳ್ಳೇ ದಿನಗಳು ಬಂದಾವು." ಆದರೆ ತನಗೆ ಮಾತ್ರ ನೀನು ಉದ್ಯೋಗಕ್ಕೆ ಹೋಗೋದು ಸುತರಾಂ ಇಷ್ಟ ಇಲ್ಲ.

ಹೌದು ಅವರೆಂದಂತೆ ಮನೆಯಲ್ಲೇ ಇದ್ದರೂ ದಿನದಿನಕ್ಕೆ ರಾಕೆಟ್‌ನಂತೆ ಏರುತ್ತಿರುವ ಬೆಲೆಗಳಿಂದಲ್ಲವೆ, ಸಂಸಾರ ತೂಗಿಸಲಾರದೆ ಸುಧಾರಿಸುವ ಬಯಕೆ ಹೊತ್ತಲ್ಲವೆ ತಾನು ಉದ್ಯೋಗ ಹಿಡಿದದ್ದು, ನನ್ನಂತೆ ಎಷ್ಟು ಹೆಣ್ಣುಮಕ್ಕಳು ಅವಿವಾಹಿತರಾಗಿಯೋ, ಪ್ರತಿಭೆಯ ಪ್ರಕಾಶನಕ್ಕೆ ಅವಕಾಶವಾಗಲೆಂದೋ, ಅಧಿಕಾರ ಲಾಲಸೆಯಿಂದಲೋ, ಸಂಸಾರದ ನಿರ್ವಹಣೆಗೋ, ಹೊಸಲು ದಾಟಿ ಹೊರಬಂದ ಹೆಣ್ಣನ್ನು ದುರುಪಯೋಗಪಡಿಸಿಕೊಳ್ಳುವ ಕಾಮುಕ ಗಂಡುಗಳ ಬಲಿಗೆ ಬಲಿಯಾಗಿ ಜೀವಮಾನ ಪರ್ಯಂತ ಮಾನಸಿಕ ಸ್ವಾಸ್ಥ್ಯ ಕಳೆದುಕೊಳ್ಳುವ ಹೆಣ್ಣುಗಳಿಗೆ ಯಾರು ಹೊಣೆ? ವಿಚಾರ ಚಕ್ರ ಮನದಲ್ಲೇ ಸುಳಿಯಂತೆ ಸುತ್ತತೊಡಗಿತ್ತು. ದುಡಿದು ದಣಿದ ಮನಕ್ಕೆ ವಿಶ್ರಾಂತಿ ಅಗತ್ಯವೆನಿಸಿತ್ತೇನೋ, ನಿದ್ರಾದೇವಿ ರಜನಿಯನ್ನು ತನ್ನ ಬಾಹುಗಳಲ್ಲಿ ಆಲಂಗಿಸಿಕೊಂಡು ಮಲಗಿಸಿ ಕೊಂಡಳು.

ದಿನ ನಿತ್ಯದಂತೆ ರಜನಿಗೆ ಬೆಳಗಿನ ಐದು ಘಂಟೆಗೆ ಎಚ್ಚರವಾಯ್ತು, ಆಫೀಸಿಗೆ ಹೋಗಬಾರದೆಂದು ನಿಶ್ಚಯಿಸಿಕೊಂಡರೂ, ಮನದಲ್ಲಿ ಮತ್ತೆ ಮತ್ತೆ ಭೀತಿ ಕಾಡತೊಡಗಿತು.

ಉದ್ಯೋಗ..........ಉದ್ಯೋಗ.......... ಕಳೆದುಕೊಳ್ಳಲು ಇಚ್ಛಿಸಳು, ಅದೊಂದು ಖಾಸಗಿ ಸಂಸ್ಥೆ ಮ್ಯಾನೇಜರ್ ಕೋಪಕ್ಕೆ ಪಾತ್ರವಾಗಿ ಉಳಿಯುವಂತೆಯೂ ಇಲ್ಲ. ಮತ್ತೆ ರಜನಿ ಬೇಗನೆದ್ದು ಮನೆಗೆಲಸಗಳನ್ನು ಪೂರೈಸಿ ತಾರಾಳಿಗೂ ರೆಡಿಮಾಡಿ, ತಾರಾ ಪಕ್ಕದ ಮನೆಯಲ್ಲಿ ಆಡ್ತಾ ಇರು, ನಾನು ಆಫೀಸಿಗೆ ಹೋಗ್ಬಿಟ್ಟು ಬೇಗ ಬರ್ತೀನಿ ಎಂದಾಗ "ಅಮ್ಮಾ, ಇವತ್ತು ನಂಗೆ ಶಾಲೆ ಇಲ್ಲ, ನಿಂಗೆ ಆಫೀಸ್ ಉಂಟೇನಮ್ಮಾ?" ಎಂದಾಗ

"ಹೌದು ತಾರಾ, ಟೈಪ್‌ಮಾಡೋದು ತುಂಬಾ ಇದೆ, ಅದಕ್ಕೆ ಇವತ್ತು ಹೋಗಬೇಕು."

"ಹೋಗಮ್ಮ ಇವತ್ತಾದ್ರೂ ಮನೇಲಿರ್ತೀಯಾ ಅಂದ್ರೆ ಇವತ್ತೂ ಹೋಗ್ತೀಯಾ?" ಎಂದಳು ಖಿನ್ನಳಾಗಿ ಮತ್ತೆ ಮನ ಏನೋ ನಿರ್ಧರಿಸಿಕೊಂಡಿತು.

"ತಾರಾ, ನೀನು ಬಾ ಆಫೀಸಿಗೆ ನನ್ನ ಜೊತೆಯಲ್ಲೇ" ಬಾ ಎಂದುತಾರಳನ್ನು ಜೊತೆಯಲ್ಲೇ ಕೊಂಡೊಯ್ದಳು ರಜನಿಯ ನಿರೀಕ್ಷೆಯಲ್ಲೇ ಇದ್ದ ಮ್ಯಾನೇಜರ್‌ಗೆ ರಜನಿಯ ಜೊತೆಯಲ್ಲಿ ಮಗುವು ಇದ್ದುದನ್ನು



ಕಂಡು, ಅವನ ಉತ್ಸಾಹವೆಲ್ಲಾ ಇಳಿಯಿತು.

"ಓ ತಾರಾ; ಈ ಮಗು ನಿಮ್ಮದೇ? ಎಂದು ಬಾರದ ಮಂದಾಹಾಸವನ್ನು ಮುಖದ ಮೇಲೆ ಎಳೆತಂದು ನುಡಿದ.

"ಹೌದು ಸಾರ್, ಈ ದಿನ ಭಾನುವಾರ ಅವಳಿಗೂ ಶಾಲೆ ಇರಲಿಲ್ಲ, ಆದ್ದರಿಂದ ಹಾಗೆ ಜೊತೆಯಲ್ಲೇ ಕರೆದುಕೊಂಡು ಬಂದೆ, ಟೈಪ್ ಮಾಡಬೇಕಾದ ಲೆಟರ್ಸ್ ಕೊಡಿ" ಎಂದಾಗ

ಮ್ಯಾನೇಜರ್ ಮರುಮಾತಿಲ್ಲದೆ ನಾಲ್ಕೈದು ಪತ್ರಗಳನ್ನು ತಾರಾಳ ಮುಂದೆ ತಂದಿಟ್ಟ. ಮಗುವಿನ ಮುಂದೆ ತನ್ನ ಮನದ ಅಭಿಲಾಷೆಯನ್ನು ಮುಂದಿಡಲು ಮ್ಯಾನೇಜರ್‌ಗೆ ಸಂಕೋಚವೆನಿಸಿತು.

ಪತ್ರಗಳನ್ನು ಟೈಪ್‌ಮಾಡಿ ಮುಗಿಸಿ ಹೊರಟಾಗ ಮೂಕನಾಗಿ ತಾಯಿ-ಮಗಳನ್ನು ನೋಡುತ್ತಾ ನಿಂತ ಮ್ಯಾನೇಜರ್.

—

---

# ಯೋಗ - ಸತ್ಯವೊ ಮಿಥ್ಯೆವೊ?

( ಒಂದು ವಿವೇಚನೆ )

—ಎನ್. ಎಸ್. ಗದಗಕರ

" In fact, the yogin is god for whom nothing is impossible"

( ವಸ್ತು ಸ್ಥಿತಿಯೆಂದರೆ ಯೋಗಿ ದೇವರಿದ್ದಂತೆ. ಅವನಿಗೆ ಅಸಾಧ್ಯ ಕೋಟಿಯ ವಸ್ತು ಯಾವುದೂ ಇಲ್ಲ)

[" ಶರೀರ ಮಾದ್ಯಂ ಖಲು ಧರ್ಮಸಾಧನಂ" ಎಂದು ಕವಿ ಕುಲಗುರು ಕಾಲಿದಾಸನು ಉಗ್ಗಡಿಸಿದನು. ಆರೋಗ್ಯ ರಕ್ಷಣೆ ಧರ್ಮಕ್ಕೆ ಆದ್ಯ ಸಾಧನೆ. ಹಠಯೋಗವು ಮನಶ್ಶುದ್ಧಿಗೆ ಅತ್ಯಾವಶ್ಯಕ. ಆಧ್ಯಾತ್ಮ ಜೀವನಕ್ಕೆ ಮೂಲಾಧಾರ. ಮಾನವನಲ್ಲಿ ಪುನರುಜ್ಜೀವನ ಉಂಟಾಗಲು ಯೋಗ ಅವಶ್ಯ. ಅದರ ಕೊನೆಯ ಗುರಿ ಎಂದರೆ ಸರ್ವೇಶ್ವರನಲ್ಲಿ ಐಕ್ಯ ಹೊಂದುವುದು. ಜನಸಾಮಾನ್ಯರಿಗೆ ಯೋಗದ ಕಲ್ಪನೆಗಳೇ ಬೇರೆಯಾಗಿರುವವು. ತಗ್ಗಿನಲ್ಲಿ ಹುಗಿಸಿಕೊಳ್ಳುವುದು, ನೀರಮೇಲೆ ನಡೆಯುವ ರೀತಿ–ಆ ಮಾದರಿಯ ಕತೆಗಳು. ಈ ಪ್ರಯೋಗಗಳಿಗೆ ವಿಜ್ಞಾನದ ಬಲ ಇದೆಯೆ? ಯೋಗ ಸತ್ಯವೊ ಮಿಥ್ಯೆವೊ? ತೀರ ವಾದಗ್ರಸ್ತ ವಿಷಯ ]

ಯೋಗದ ಮಾತು ಹೊರಟಾಗ, ಶ್ರೀ ಶಂಕರ ಭಗವತ್ಪಾದರ ಕತೆ ನೆನಪಾಗುವುದುಂಟು. ಸರ್ವಜ್ಞತ್ವವನ್ನು ಮನಗಾಣಿಸಿಕೊಡಲು ಅವರು ಮಂಡನ ಮಿಶ್ರರೊಡನೆ ವಾದ ಹೂಡಿದರಷ್ಟೇ ! ಉಳಿದ ಎಲ್ಲ ವಿಷಯಗಳ ಚರ್ಚೆಯಲ್ಲಿ ಶಂಕರಾಚಾರ್ಯರ ಕೈ ಮೇಲಾಗಲು ಕೊನೆಗೆ ಕಾಮ ಸೂತ್ರದ ಪ್ರಶ್ನೆ ಎದ್ದಿತು. ಅಲ್ಲಿಯ ಜ್ಞಾನವನ್ನು ಒರೆಗೆ ಹಚ್ಚುವ ಸನ್ನಿವೇಶ ಪ್ರಾಪ್ತವಾಯ್ತು. ಆ ತರುಣ ಸಂನ್ಯಾಸಿಗೆ ಸ್ವಾಭಾವಿಕವಾಗಿ ಈ ವಿಷಯ ಹೇಗೆ ತಿಳಿದಿರಬೇಕು ? ಸರಿ ಎಂದು ಅವರು ನಡೆದಾಗ ಅಮರುಕ ರಾಜನ ಅಂತ್ಯ ಸಂಸ್ಕಾರದ ಮೆರವಣಿಗೆ ಸಾಗಿತ್ತು. ತಮ್ಮ ಉದ್ದೇಶ ಸಾಧನೆಗಾಗಿ ಅವರು ತಮ್ಮ ಯೋಗ ಸಾಮರ್ಥ್ಯದಿಂದ ಪರಕಾಯ ಪ್ರವೇಶಮಾಡಿದರು. ಸತ್ತ ದೊರೆ ಎದ್ದು ಕುಳಿತ. ಅವನನ್ನು ಅರಮನೆಗೆ ಕರೆತಂದರು. ಅಲ್ಲಿ ಕೆಲಕಾಲ ಆಚಾರ್ಯರು ಸಾಂಸಾರಿಕ ಜೀವನ ನಡೆಸಿದರು. ಮೃತ ಶರೀರದಲ್ಲಿ ಪ್ರವೇಶಿಸುವ ಪರಂಪರೆ ಭಾರತದಲ್ಲಿ ಪ್ರಾಚೀನಕಾಲದಿಂದ ಬಂದಿರುವುದು. ಕಾರ್ಯ ಸಾಧಿಸಿ ಮರಳಿ ತಮ್ಮ ದೇಹಕ್ಕೆ ಬರುವಾಗ ಯೋಗಿಗೆ ಹಲವಾರು ತೊಡಕುಗಳು ಬರುವ ಸಂಭವ ಉಂಟು. ಪರಕಾಯ ಪ್ರವೇಶಮಾಡಿದಾಗ ಮೂಲ ದೇಹದ ಗತಿ ಏನು ? ಅವರ ರಕ್ಷಣೆ ಆಗುವುದು ದೊಡ್ಡ ಪ್ರಶ್ನೆಯೆ !

ಆಧುನಿಕ ಮನ್ವಂತರದಲ್ಲಿ ಈ ಪರಕಾಯ ಪ್ರವೇಶದ ದೃಷ್ಟಾಂತಗಳೇ ವಿರಳ. ಆದರೂ ಹಿಮಾಲಯದಲ್ಲಿಯ ಕೆಲವು ಯೋಗಿಗಳು ಈ ಹಠಯೋಗವನ್ನು ಪಾಲಿಸುತ್ತಿರುವರೆಂದು ನಮಗೆ ಕೇಳಿ ಗೊತ್ತು. ಕಂಡು ಅಲ್ಲ ! ಭಾರತೀಯನು ಇಂದಿಗೂ ನೀರ ಮೇಲೆ ನಡೆವ ಜನರಿರುವರೆಂದರೆ ನಂಬುವನು. ಗಾಳಿಯಲ್ಲಿ ಹಾರಿಹೋಗುವ ಯೋಗಿಗಳೂ ಅವನ ಪಾಲಿಗೆ ಉಂಟು ಒಟ್ಟು ಯೋಗಿ ಎಂದರೆ ಅವನು ಸರ್ವ ಶಕ್ತ ಪರಮಾತ್ಮನೆ! ಅವನಿಗೆ ತ್ರಿಕಾಲ ಜ್ಞಾನಿಗಳಲ್ಲಿ ವಿಶ್ವಾಸ ಉಂಟು.

ಅನೇಕ ದಿನ ನೆಲದಲ್ಲಿ ಹೂಳಿಸಿಕೊಳ್ಳುವುದು ಇಂದು ಸಾಮಾನ್ಯ ಪ್ರಯೋಗ ಎನಿಸಿದೆ. ಮಹಾರಾಜ ರಣಜಿತ್ ಸಿಂಗನ ಕಾಲಕ್ಕೆ ಪೆಟ್ಟಿಗೆಯಲ್ಲಿ ಬಹುಕಾಲ ಕುಳಿತುಕೊಳ್ಳುವ ಯೋಗಿಗಳಿದ್ದರಂತೆ. ಇದೇನು ಸುಳ್ಳು ವಾಹಿನಿಯಲ್ಲ. ಸರ್ ಕ್ಲಾಡ್ ಓಡ ಎಂಬ ಆಂಗ್ಲ ಗೃಹಸ್ಥ ಉಸುರುವಂತೆ, ಭಾರತೀಯ ಯೋಗಿ ಒಬ್ಬ ಆರು ವಾರ ಪೆಟ್ಟಿಗೆಯಲ್ಲಿಯೇ ಇದ್ದನಂತೆ. ಹೊರಗೆ ತೆಗೆದು ಬಿಸಿನೀರು ಸ್ನಾನ ಮಾಡಿಸಿಯಾದಮೇಲೆ ಮೊದಲಿನಂತೆ ಅವನು ಆದನಂತೆ ! ತೀರ ಇತ್ತಿತ್ತಲಾಗಿ ನಾರಾಯಣದಾಸಸ್ವಾಮಿ ಎಂಬ ಯೋಗಿ ೧೯೭೧ ನೇ ಇಸ್ವಿ ಸೆಪ್ಟೆಂಬರ್ ತಿಂಗಳಲ್ಲಿ ಮುಂಬಯಿ ಬಳಿಯ ಠಾಣೌದಲ್ಲಿ ೧೪೦ ತಾಸುಗಳವರೆಗೆ ಇಟ್ಟಂಗಿಯ ಕೋಣೆಯಲ್ಲಿ ನೆಲಸಿದನಂತೆ. ಒಳಗಿರುವಾಗ ಅವನನ್ನು ಕನ್ನಡಿಯೊಳಗಿಂದ ಸಂದರ್ಶಕರು ನೋಡುತ್ತಿದ್ದರು. ಆ ಕೊಠಡಿಗೆ ಕೊಳವೆಯೊಂದು ಮಾತ್ರ ಇದ್ದಿತು.



ಪ್ರಾಣವಾಯುವಿನ ಪೂರೈಕೆಗಾಗಿ ಇದ್ದಿರಬೇಕು!

### ಪತಂಜಲಿಯ ಕಲ್ಪನೆ !

ಆದರೆ ಕೆಲವು ಸಾಧು ಜನರು ಅದ್ಭುತ ಪ್ರಯೋಗ ಮಾಡಹೋಗಿ ಮರಣ ಹೊಂದಿದೂ ಉಂಟು. ಕೆಲವರು ಹೆಸರು ಕೆಡಿಸಿಕೊಂಡರು. ಅಂತಹರಲ್ಲಿ ಹಠಯೋಗಿ ಎಲ್. ಎಸ್. ರಾವ್ ಒಬ್ಬರು. ಅವರು ನೈಟ್ರಿಕ್ ಆ್ಯಸಿಡ್, ಹೈಡ್ರೋಕ್ಲೋರಿಕ್ ಆ್ಯಸಿಡ್ ಕುಡಿಯುತ್ತಿದ್ದರು. ಆದರೆ ಮುಂಬಯಿಯಲ್ಲಿ ಅವರು ನೀರಮೇಲೆ ನಡೆಯಲು ಹೋಗಿ ಕೆಟ್ಟರು. ಐದುಸಾವಿರ ಪ್ರೇಕ್ಷಕರೆದುರು ಅವರ ಪ್ರಯೋಗ ಅಯಶಸ್ವಿ ಆಯಿತು! ಹಿಂದೆ ಕಾಜುಕ್ಕಿಂದುದು ಸುಳ್ಳೆನಿಸುವಂತಾಯ್ತು!

ಯೋಗ ಸಾಧನೆಗಳು ಸಿದ್ಧಿ ಇಲ್ಲವೇ ಪರಿಪೂರ್ಣತೆಯ ಕಕ್ಷೆಯಲ್ಲಿ ಬರುವವು. ನೈಜಯೋಗಿಯು–ಇವು ಜಾದೂ ಇಲ್ಲವೇ ಕಣ್ಣುಟ್ಟು, ಕಸರತ್ತು ಎಂದು ತುಚ್ಛೀಕರಿಸುವನು. ಯೋಗದ ಕೊನೆಯ ಉದ್ದೇಶ ಸಮಾಧಿ. ಈ ಉದ್ದೇಶಕ್ಕೆ ಜಾದೂ ಮೊದಲಾದವು ಭಂಗತರುವವು ರಸಾಯನ, ಮಂತ್ರ, ಚಿತ್ತದೃಢತೆಯಿಂದ ಅನೇಕ ಸಿದ್ಧಿಗಳು ವಶವಾಗುವವೆಂದು ಪತಂಜಲಿಯ ವಿಚಾರ. ನೈಜ ಯೋಗವು ಉಚ್ಚಮಟ್ಟದ ಜೀವನಕ್ಕೆ ವ್ಯಕ್ತಿಯನ್ನು ಅಣಿಗೊಳಿಸುವುದು ದೇಹ. ಮನಸ್ಸು, ಇಂದ್ರಿಯಗಳು ಆಗ ಅಲೌಕಿಕತೆ ಪಡೆಯುವವು.

ಮನಸ್ಸಿನ ಶಕ್ತಿಯಿಂದ ಯೋಗ ಸಾಧಿಸುವುದು ಸ್ವಾಮಿ ವಿವೇಕಾನಂದರಿಗೆ ಸಂಕಾಣಲಿಲ್ಲ. ಈ ಶಕ್ತಿಗಳು ಮನುಷ್ಯನನ್ನು ಒಮ್ಮೊಮ್ಮೆ ಅಡ್ಡದಾರಿಗೆ ಎಳೆಯುವ ಸಂಭವ ಹೆಚ್ಚು ಎಂದು ಅವರ ಅಭಿಪ್ರಾಯ. ಶಕ್ತಿಯ ದುರುಪಯೋಗ ಆಗುವದೂ ಉಂಟು, ಲೈಂಗಿಕ ಭಾವನೆಗಳು ಆಗೀಗ ವಿಲಕ್ಷಣ ಕೋಲಾಹಲ ಎಬ್ಬಿಸಿ ಮನಃ ಶಾಂತಿಯನ್ನು ನುಚ್ಚುನೂರು ಮಾಡುವವು. ಶಕ್ತಿಗಳಿಂದ ಮಂಗತನಗಳ ಉಪಟಳಗಳೇ ಹೆಚ್ಚುವಲ್ಲಿ ಸಂದೇಹವಿಲ್ಲ.

ದುಷ್ಪರಿಣಾಮಗಳು ಏಂತಿದ್ದರೂ ಯೋಗ ಸಾಧಕರು ತಮ್ಮ ಚಟುವಟಿಕೆ ಬಿಟ್ಟುಕೊಟ್ಟಿಲ್ಲ. ತಮ್ಮ ಅಂತಃ ಶಕ್ತಿಯಿಂದ ಹಗುರಾಗುವರು, ಭಾರವಾಗುವುದು ವಶೀಕರಣಮಾಡುವುದು, ಅಸಾಧ್ಯ ಕೋಟಿಯ ವಸ್ತುಗಳಿಗೆ ಕೈ ಚಾಚುವದು. ಪ್ರಳಯಾಂತಕರು ಅವರು ಎಂದು ಕೊನೆಗೆ ಹೇಳಬೇಕು.

ಮಾನವನು ಎಂದೂ ಉಧಾತ್ತ ಮಟ್ಟದ ಜೀವನ ನಡೆಸುವ ಹವ್ಯಾಸ ತಳೆದಿರುವನು. ಅಲ್ಡಸ್ ಹಕ್ಸಲೆ ಅವರು ಹೇಳುವಂತೆ ಯೋಗಿ ಏರಬಲ್ಲನು. ಇಳಿಯಬಲ್ಲನು, ಗಾಳಿಯಲ್ಲಿ ಹಾರಾಡಬಲ್ಲನು ಹಕ್ಕಿಯಂತೆ ಅವನಲ್ಲಿ ಮಾಯಾಶಕ್ತಿ ಉದಿಸುವುದು. ಶ್ರೀ ಶಂಕರ ಭಗವತ್ಪಾದರ ಜೀವನ ನಿರುಕಿಸಿರಿ. ಅವರು ಕೇವಲ ೩೨ ವರ್ಷ ಬಾಳಿದರು. ಭಾರತದ ಉದ್ದಅಗಲ ಕಂಡು ಬಂದರು. ಹಿಮಾಲಯದಲ್ಲಿಯೂ ತಮ್ಮ ಮಠ ಸ್ಥಾಪಿಸಿದರು. ಅಂತರಿಕ್ಷದಲ್ಲಿ ಉಡ್ಡಾಣಮಾಡುವ ಶಕ್ತಿ ಇಲ್ಲದಿದ್ದರೆ ಅವರಿಗೆ ಇದೆಲ್ಲ ಹೇಗೆ ಸಾಧ್ಯ ಇದ್ದಿತು? ಅವರದು ಯೋಗಜೀವನವೇ ಖಂಡಿತ. ಅವರ ತಾತ್ವಿಕ ವಿಚಾರ ಪ್ರಣಾಳಿಯನ್ನೇ ವಿಚಾರಿಸಿರಿ.

ಮೋಕ್ಷವೆಂದರೆ ಆತ್ಮ ಪರಮಾತ್ಮನೊಡನೆ ಲೀನವಾಗುವುದು. ಇದು ಯೋಗ ಇಲ್ಲವೇ ಸಾಂಖ್ಯದಿಂದಲೇ ಸಾಧ್ಯ"

ಗೌತಮ ಬುದ್ಧನು ದೊಡ್ಡ ಯೋಗಿ. ಅವನ ವಿಚಾರಗಳೂ ಈ ದಿಸೆಯಲ್ಲಿ ಗಮನಾರ್ಹವಾಗಿವೆ. ಮಾನವನಲ್ಲಿಯ ದೌರ್ಬಲ್ಯಗಳು ಮಾಯವಾದಾಗ ಮನಸ್ಸು ಸ್ಫಟಿಕದಷ್ಟು ನಿರ್ಮಲವಾಗುವುದು. ಆಗ ವಿಚಾರ ಪರಿವರ್ತನೆ ಆಗುವುದು. ವ್ಯಕ್ತಿ ಪರಮಾತ್ಮನಲ್ಲಿ ಲೀನನಾಗುವನು.

ಪತಂಜಲಿ ಸೂತ್ರಗಳು ಅನೇಕ ಸಲ ಸಾಮಾನ್ಯರಿಗೆ ಅರ್ಥವಾಗುವುದಿಲ್ಲ. ಅವು ಸ್ಫುಟವಾಗಿವೆ. ಅಲ್ಲಿ ಕ್ಲೇಶಕ್ಕೆ ಎಡೆಯುಂಟು ಅದು ಏನೇ ಇದ್ದರೂ ಯೋಗದ ಗುರಿ ಸಮಾಧಿ. ಆಧುನಿಕ ಮನ್ವಂತರದ ಮಹಾ ಪುರುಷರಾದ ಶ್ರೀ ರಾಮಕೃಷ್ಣ ಪರಮಹಂಸರು ರಮಣ ಮಹರ್ಷಿಗಳು ತಮ್ಮ ಚಿತ್ತಕ್ಕೆ ಹೊಳೆದಾಗ ಸಮಾಧಿ ಹೊಂದುತ್ತಿದ್ದರು. ಇದು ಸಾಮಾನ್ಯರಿಗೆ ನಿಚ್ಚಳವಾಗಿ ಹೊಳೆಯದು.

### ಶಕ್ತಿ ವೈಶಿಷ್ಟ್ಯ

ಎರಡು ಸಾವಿರ ವರ್ಷಗಳ ಹಿಂದೆ ಪತಂಜಲಿಯು ಯೋಗ ಶಕ್ತಿಯನ್ನು ಕಂಡುಹಿಡಿದನು. ಅವನ

ವಿಧಾನ, ಸೂತ್ರಗಳು ಕಾಲಕಾಲಕ್ಕೆ ಪರಿವರ್ತಿತವಾದವು. ಅವನ ತಂತ್ರಯೋಗವು ಸಾಮಾನ್ಯನಿಗೂ ಪಂಡಿತನಿಗೂ ಮೋಹಕ ಎನಿಸಿದೆ. ಕುಂಡಲಿನಿ ಎಂಬ ಶಕ್ತಿಗೆ ಪತಂಜಲಿ ಬಹಳ ಪ್ರಾಶಸ್ತಿ ಸಲ್ಲಿಸಿದನು. ಸರ್ ಜಾನ್ ಉಡ್ರಾಫನು ಅದಕ್ಕೆ ಸರ್ವಶಕ್ತಿ ಎಂದು ಹೆಸರಿಸಿದನು. ಪತಂಜಲಿಯ ಪ್ರಕಾರ ಮಾನವ ಶರೀರದಲ್ಲಿ ಆರು ಚಿತ್ರಗಳು ಉಂಟು. ಇವು ಕಮಲದಾಕಾರದಲ್ಲಿವೆ ಎನ್ನುವರು. ಪಾಶ್ಚಿಮಾತ್ಯ ಸರಣಿಯಂತೆ ಇವು ಗ್ಲ್ಯಾಂಡ್ ಎಂದು ಹೇಳಬಹುದು.

ಐದು ಚಿತ್ರಗಳು ಬೆನ್ನುಹುರಿಗೆ ಇರುವವು. ಅದಕ್ಕೆ ಮೇರುದಂಡ ಅನ್ನುವರು. ಮೂಲಾಧಾರ, ಮಣಿಪೂರ, ಅನಾಹತ, ವಿಶುದ್ಧ, ಅಜ್ಞ ಇವೆ ಮೊದಲಾದವು ಕೆಳಗಿನಿಂದ ಗಂಟಲುವರೆಗೆ ವ್ಯಾಪಿಸಿರುವವು. ತಲೆಬುರುಡೆಯ ಮೇಲ್ಭಾಗಕ್ಕೆ 'ಸಹಸ್ರಾರ' ಎಂಬದು ಇರುವದು. ಈ ಚಿತ್ರಗಳು ಬಣ್ಣ ಬಣ್ಣದವಿದ್ದು ಪತಳಿಗಳೂ ವಿಭಿನ್ನವಾಗಿರುವವು. ಬೆನ್ನು ಹುರಿಯ ಮಧ್ಯಭಾಗದ ನಾಡಿ 'ಸುಷುಮ್ನ ಎಂದು ಹೆಸರಾಗಿದ್ದು ಚೇತನಾ ಕೇಂದ್ರವಾಗಿದೆ. ನೈಜ ಯೋಗ ಹಾಗೂ ಫ್ರಾಯಿಡನ ಸಿದ್ಧಾಂತಗಳಿಗೂ ಈ ಚಿತ್ರಗಳಿಗೂ ಏನು ಸಾಮ್ಯವೂ ಹೇಳುವಸು ಬಿಗಿ !

ಕುಂಡಲಿನಿ ಶಕ್ತಿ ವಿಶಿಷ್ಟವಾಗಿದೆ ಅದೊಂದು ಯೋಗ ವಿಧಾನ. ಇದರ ಸಾಧಕನು ವಿಧ ವಿಧ ಆಸನ ಹಾಕಿ ಅನುಪಮ ಶಕ್ತಿಪಡೆದು ಅಂತರಿಕ್ಷಕ್ಕೆ ಏರುತ್ತಾನೆ ಎನ್ನುವದುಂಟು. ಇಂದಿನ ವೈಜ್ಞಾನಿಕ ಯುಗದಲ್ಲಿ ಈ ಶಕ್ತಿಯಲ್ಲಿ ಪಾಶ್ಚಾತ್ಯರು ವಿಶ್ವಾಸ ತಳೆಯುವುದಿಲ್ಲ. ಸೃಷ್ಟಿಯ ಕ್ರಮಕ್ಕೆ ಭಂಗ ಎಂದು ಅಪಹಾಸ್ಯಮಾಡುವರು.

**ಅಮಾನುಷತೆ**

ಬ್ರಹ್ಮಚರ್ಯ ಶಕ್ತಿಗೆ ಭಾರತೀಯರು ಮಹತ್ವ ಕೊಟ್ಟಿರುವರು. ಆ ಶಕ್ತಿ ಮಾನವನಿಗೆ ಕಾಂತಿ ಚೈತನ್ಯ ಒದಗಿಸುವದು. ಮಾನವನಲ್ಲಿ ಈ ಮೂಲಕ ಉಂಟಾಗುವ ಓಜಸ್ ಶಕ್ತಿಯನ್ನು ಸ್ವಾಮಿ ವಿವೇಕಾನಂದರು ಘನವಾಗಿ ಪ್ರಶಂಸಿಸಿರುವರು. ಕಾಮ, ಯೋಗ-ಎರಡೂ ಶಕ್ತಿಗಳಿಗೆ ಮುಕ್ತ ಮನ್ನಣೆ ಸಲ್ಲಿಸಿದುದು ಭಾರತೀಯ ತತ್ವಜ್ಞಾನದ ಅಪೂರ್ವತೆ. ಭಕ್ತಿ, ಮುಕ್ತಿ-ಈ ಎರಡೂ ಪ್ರಪಂಚಗಳಿಂದ ಮಾನವನಲ್ಲಿ ಶ್ರೇಷ್ಠತೆ ಉಂಟಾಗುಗವದೆಂಬುದು ಸಮುಂಜಸ ಮಾತು.

ಯೋಗ ಸಾಮರ್ಥ್ಯವನ್ನು ಹಲವರು ಅಪಹಾಸ್ಯಮಾಡುವರು. ಇದು ತರವಲ್ಲ ಅವರ ಘನತೆಯ ಪ್ರತೀಕವಾಗಿ ಲೋನಾವಳದಲ್ಲಿ ಆರೋಗ್ಯ ಕೇಂದ್ರ ಇರುವದು. ಮುಂಬಯಿಯ ದಿವಂಗತ ಸ್ವಾಮಿ ಕುವಲಯಾನಂದರು ಹಿಂದಕ್ಕೆ ಈ ಕ್ಷೇತ್ರದಲ್ಲಿ ಅಮೌಲ್ಯ ಸಂಶೋಧನೆ ನಡಿಸಿದರು. ಅನೇಕ ಪಾಶ್ಚಿಮಾತ್ಯ ವಿದ್ವಾಂಸರು ಇಂತಹ ಸಂಸ್ಥೆಗಳ ಯೋಗ ಪ್ರಯೋಗಗಳನ್ನು ಮನಸಾರೆ ಪ್ರಶಂಸಿಸಿರುವರು. ತಗ್ಗಿನಲ್ಲಿ ಹುಗಿಸಿಕೊಳ್ಳುವ ಸಿದ್ಧಿ ಅಚ್ಚರಿ ಹುಟ್ಟಿಸುವುದು ನಿಜ "ಘೇರಂಡ ಸಂಹಿತ"ದಲ್ಲಿ ಹೇಳಿದ "ಖೇಚರಮುದ್ರಾ" ಸ್ಥಿತಿ ದಂಗು ಬಡಿಸುವದು. ನಾಲಗೆಯನ್ನು ಹೊರಗೆಳೆದು ಮೂಗಿನ ಹೊರಳಿಗೆ ಹಚ್ಚಿ ಹುಬ್ಬಿನೆಡೆಗೆ ದೃಷ್ಟಿಯನ್ನು ದೃಢೀಕರಿಸಿದಲ್ಲಿ ಅಂತರಿಕ್ಷದಲ್ಲಿ ಹಾರಬಹುದಂತೆ! ಆಗ ಹಸಿವೆ, ನೀರಡಿಕೆ ರೋಗರುಜಿನ ಅನಿಸುವದಿಲ್ಲ. ಈ ಪ್ರಯೋಗಗಳನ್ನು ಪಾಶ್ಚಾತ್ಯರು ನಂಬಲಿ ಬಿಡಲಿ ಯೋಗದಿಂದ ಸಂಯಮ ತಲೆದೋರುವದೆಂಬಲ್ಲಿ ತಿಲ ಮಾತ್ರ ಸಂದೇಹ ವಿಲ್ಲ!

**ರೋಗ ರುಜಿನ ನಿವಾರಣೆ**

ಹಾರ್ವರ್ಡ ಮೆಡಿಕಲ್ ಯುನಿಟ್‌ದಲ್ಲಿ ಇತ್ತಿತ್ತಲಾಗಿ ಹಲವಾರು ಸಂಶೋಧನಾ ಪ್ರಯೋಗಗಳು ನಡೆದಿವೆ. ಅವುಗಳಿಂದ ಕೆಲವು ಸಂಗತಿಗಳು ಮನವರಿಕೆಯಾದುದುಂಟು. ಮೊಟ್ಟಮೊದಲು ಯೋಗ ಧ್ಯಾನ ಇವುಗಳಿಂದ ಧೈಹಿಕ ಮಾರ್ಪಾಟು ಕಂಡು ಬಂದಿವೆ. ರಕ್ತದ ಒತ್ತಡ, ಚರ್ಮರೋಗ ಇವುಗಳ ನಿವಾರಣೆ ಆಗುವದೆಂದು ಹೊಳೆದಿದೆ. ಮನಸ್ಸು ಸುಪ್ರಸನ್ನವಾಗುವದೆಂದು ತಿಳಿದಿದೆ. ಇವೆಲ್ಲ ಸದ್ಗುಣಗಳ ಶಿಫಾರಸುಗಳಾದವು. ಆದರೆ ಬ್ರಿಟಿಷ್ ವೈದ್ಯಳೊಬ್ಬಳ ಹೇಳಿಕೆಯಂತೆ, ಯೋಗ, ಸಾಧನೆ ಎಲ್ಲರಿಗೂ ವಶವರ್ತಿ ಆಗದು. ಅದಕ್ಕೆ ವೈಜ್ಞಾನಿಕ ಸ್ವರೂಪವಿಲ್ಲ. ಶ್ರೀ ಸ್ವಾಮಿ ರಾಮರ ಅಭಿಪ್ರಾಯದಂತೆ ಕ್ಯಾನ್ಸರ್, ಟ್ಯುಮರ್ ಮೊದಲಾದ ರೋಗಗಳು ಯೋಗದ ಸಿದ್ಧಿಯಿಂದ ವಾಸಿಯಾಗುವವಂತೆ ಸ್ವಾಮೀಜಿಯು ಇಪ್ಪತ್ತು ಕೇಂದ್ರಗಳಲ್ಲಿ ಇಂತಹ ಎಷ್ಟು ರೋಗಗಳು ನಿರ್ನಾಮವಾದುವೆಂಬುದರ ವಿವರ ತಿಳಿದಿಲ್ಲ. ಡೈಬೆಟಿಸ್, ಕೆಮ್ಮು ದಮ್ಮುಗಳ ನಿವಾರಣೆ ಕೂಡ ಸಾಧ್ಯವಿದೆಯೆಂದು ೧೯೬೧ ರಲ್ಲಿ ಆರೋಗ್ಯ ಮಂತ್ರಿ ಶ್ರೀ ಡಿ. ಪಿ. ಕರಮರಕರ ಅವರು ನವದೆಹಲಿಯಲ್ಲಿಯ ತಮ್ಮ ಭಾಷಣದಲ್ಲಿ ಅಂಕಿ ಸಂಖ್ಯೆ ಹೇಳಿ ಸುಮಾರು ನೂರಕ್ಕೂ ಐವತ್ತರಷ್ಟು ರೋಗಗಳು ಯೋಗಸಿದ್ಧಿಯಿಂದಲೇ ಹೇಳ ಹೆಸರಿಲ್ಲವಾದುವೆಂದು ನಿವೇದಿಸಿದರು.

ಮುಂಬಯಿಯ ಯೋಗ ಸಂಸ್ಥೆ ಗಮನಾರ್ಹ ಪ್ರಯೋಗಗಳನ್ನು ಮಾಡುತ್ತಲಿದೆ. ಡಾಕ್ಟರ ಕೆ.ಕೆ. ದಾತೆ, ಡಾಕ್ಟರ ಎನ್. ಎಸ್. ವಾಹಿಯಾ, ಪಂಡಿತ ಶಿವಶರ್ಮ ಮೊದಲಾದ ಗಣ್ಯ ವ್ಯಕ್ತಿಗಳು ಈ ಸಂಸ್ಥೆಯ ಯೌಗಿಕ ಕಾರ್ಯವನ್ನು ಹೊಗಳಿರುವರು. ಮನೋರೋಗ, ಡೈಬೆಟಿಸ್ ದಮ್ಮು ಮುಂತಾದ ರೋಗಗಳು ಬಹುಮಟ್ಟಿಗೆ ನಿವಾರಣೆಯಾದುದು ಈ ಸಂಸ್ಥೆಯ ಹಿರಿಯ ಕಾರ್ಯದಿಂದಲೇ ಎಂದು ತಿಳಿದಿದೆ. ಭಾರತೀಯ ಸಂಶೋಧಕ ವೈದ್ಯ ಕೇಂದ್ರಕ್ಕೆ ಈ ಸಂಸ್ಥೆಯ ಸಂಚಾಲಕರು ಒದಗಿಸುವ ವಿಸ್ತೃತ ವರದಿಗಳಿಂದ ಇದು ಕಂಡು ಬಂದಿದೆ. ಮತ್ಸ್ಯ, ಧನು, ಶವ, ಕಮಲ ಈ ಆಸನಗಳ ಸತ್ಪರಿಣಾಮಗಳು ಮನುಷ್ಯನ ನಿತ್ಯ ಜೀವನದ ಮೇಲೆ ವಿಶೇಷ ಆಗುವವೆಂದು ಬೇರೆ ಹೇಳಬೇಕಾದ ಅಗತ್ಯವಿಲ್ಲ.

ಏನಿದ್ದರೂ ಯೋಗ ರಂಗದಲ್ಲಿ ವ್ಯವಸ್ಥಿತ ಸಂಶೋಧನೆಗಳು ಆಗಿಲ್ಲ. ಮನುಷ್ಯನ ಸಮಗ್ರ ವ್ಯಕ್ತಿತ್ವದ ಬೆಳೆವಣಿಗೆಗಾಗಿ ಯೋಜಿಸಲಾದ ಆ ಆಸನ ಸಾಧನೆಗಳಿಗೆ ವೈಜ್ಞಾನಿಕ ವಿಚಾರದ ರೀತಿ ನೀತಿ ಪರಂಪರೆ ಅನ್ವಯಿಸಲಾರವು. ಇಂದು ಜಗತ್ತಿನ ಮೂಲೆ ಮೂಲೆಗಳಲ್ಲಿ ಅಸಂಖ್ಯಾತ ಸ್ವಾಮಿಗಳು ಪಾಶ್ಚಿಮಾತ್ಯ ಸಂಸ್ಕೃತಿಗೆ ಪ್ರತಿಯಾಗಿ ತಮ್ಮ ವಿಶಿಷ್ಟ ಸಂಸ್ಕೃತಿಯನ್ನು ರೂಪಿಸಿರುವರು. ಅದರಿಂದ ಮನಃಶಾಂತಿ, ರಸಮಯ ಜೀವನ ಲಭಿಸುವವೆಂದು ಪ್ರತೀತಿ ಇದೆ. ಈ ದಿಸೆಯಲ್ಲಿ ಅವರ ಪದ್ಧತಿಗಳು ಒಮ್ಮೊಮ್ಮೆ ವಿಚಿತ್ರ. ಅವ್ಯವಹಾರ್ಯ ಎನಿಸುವುದು. ವಾದಗ್ರಸ್ತ, ಸಂದೇಹಾಸ್ಪದ ಕೂಡ ಇರುವವು.

ಇಂದು ಪರದೇಶಗಳ ಮೇಲೆ ಭಾರತೀಯರಾದ ನಾವು ನಮ್ಮ ಯೋಗ ಸಿದ್ಧಿಯ ಪ್ರಭಾವ ಬೀರಬೇಕಾಗಿಲ್ಲ. ಆದರೇನು ನಮ್ಮಲ್ಲಿಯ ಯೋಗಿಗಳು ಇಂಗ್ಲಂಡ್, ಅಮೇರಿಕೆ, ಜರ್ಮನಿ ದೇಶಗಳ ತಮ್ಮ ಜಾಣ್ಮೆಯನ್ನು ಪ್ರದರ್ಶಿಸುವ ಹಂಬಲು ಇರಿಸಿಕೊಂಡಿರುವರು! ಅವರ ಅಹಂಕಾರ ಇಳಿದಿದೆಯೊ ಇಲ್ಲವೊ ಸಂದೇಹಾಸ್ಪದ. ನಮ್ಮ ಯೋಗಬಲದಿಂದ ನಾವಿಂದು ರಾಷ್ಟ್ರದ ಸತ್ವ ಹೆಚ್ಚಿಸಿದರೆ ಚೆನ್ನು. ರಾಜಯೋಗದ ದೃಷ್ಟಿಯಿಂದ ನಾವಿಂದು ಕರ್ಮಯೋಗದ ಘನತೆಯನ್ನು ಅರಿಯಬೇಕಾಗಿದೆ. ಸತ್ಯಂ ಶಿವಂ ಸುಂದರಂ ನಮ್ಮ ತಾರಕ ಮಂತ್ರವಾಗಲಿ. ಕೇವಲ ಜಾಮು, ಕಸರತ್ತು, ಕಣ್ಕಟ್ಟಿನ ಲೀಲೆ ನಾಲ್ಕು ದಿನದ್ದು ! (ಸಾಧಾರ)

# ವಾಲಿಯ ಪ್ರಶ್ನೆ

(ಲಾವಣಿ ವಟ್ಟ) ಎಂ. ಜಿ. ವೆಂಕಟೇಶಯ್ಯ

ಬೀಳುತ ವಾಲಿಯು ಸುತ್ತಲು ನೋಡಿದ। ರಾಮನ
ಕಾಣುತ ವೃಕ್ಷದಡೆ।
ವೀರನೆ ನೀನಲ! ರಾಮನು ನೀನೆಯೊ!
ಬಚ್ಚಿಟ್ಟುಕೊಂಡು ಕೊಂದೆಯಲ! ॥೧॥
ನನ್ನನ್ನು ಎದುರಿಸಿಯುದ್ಧಕೆ ನಿಲ್ಲದೆ। ಕ್ಷತ್ರಿಯ ತೇಜನ
ಕಳಕೊಂಡೆ।
ಸೋದರ ಬದುಕಿದರೆ ನಿನ್ನನ್ನು ಕೊಲ್ಲುವ।
ಕಾರ‍್ಯದಿ ಎಲ್ಲವು ನಿಷ್ಫಲವೆ। ॥೨॥
ತೀಕ್ಷ್ಣದ ಶರದಲಿ ಸಾಯುವೆ ನಾನಲ। ಸ್ವರ್ಗವು
ಸಿದ್ಧವು ಅದರಿಂಡೆ।
ಗಳಿಸಿದೆ ನೀನು ಈ ತೆರ ಕಾರ‍್ಯದಿ।
ಎಂದಿಗು ನಿಲ್ಲುವ ಅಪಕೀರ್ತಿ ॥೩॥
ಮೇಲೆಯೆ ಹೊದ್ದಾ ವೇಷವ ಕಂಡೆನು।ಕುಟಿಲದ ಬುದ್ಧಿ
ಯು ಒಳಗಡೆಯೆ॥
ನಿನ್ನನು ಕಾಣನು ನನ್ನನು ಕಾಣೆಯೆ।
ಅಪರಾಧವೇನಾಯ್ತು ನನ್ನಿಂದೆ? ॥೪॥
ಸತ್ಯವು ಧರ್ಮವು ದಾನ ಪರಾಕ್ರಮ। ಎಲ್ಲವು
ಭೂಪನ ಗುಣಗಳು।
ಕಪಟವು ಲೋಭವು ಭೀತಿಯ ಧರ್ಮವು
ನಿನ್ನಯ ಗುಣಗಳೆ ಆದವಲ! ॥೫॥
ತಾರೆಯ ಮಾತನು ಕೇಳದೆ ಹೋದೆನು। ಈ ಪಶ್ಚತ್ತಾ
ಪದಿ ಫಲವೇನು?

ಸತ್ಪುರುಷರ ಮಾರ್ಗವ ತುಳಿಯದ
ನಿನ್ನಯ ಬಾಣದಿ ಸತ್ತೆನಲ! ॥೬॥
ವಾಲಿಯ ಮಾತನು ಕೇಳಿದ ರಾಮನು। ಸರಿದನು
ವಾಲಿಯ ಹತ್ತಿರಕೇ।
ನಗುತಲಿ ಪೇಳಿದನುತ್ತರವಾಗಲೇ
ವಾಲಿಯ ವದನವ ನೋಡುತ್ತಾ ॥೭॥
ತಮ್ಮನು ಶಿಷ್ಯನು ಪುತ್ರನು ಒಂದೇ। ಎಂಬುದ
ನೀತಿಯ ಬಲ್ಲೆಯದ।
ತಮ್ಮನ ಪತ್ನಿಯು ಸೊಸೆಯೆ ನಿನಗೆ
ಎಂಬುದ ನೀತಿಯು ಬಿಟ್ಟೆಯಲ! ॥೮॥
ಸೋದರ ಭಾವನ ಮರೆತವ ಮನುಜನಾ। ಮನುಜನೆ
ಅಲ್ಲವು ವ್ಯಾಘ್ರವಲ!
ಅಜಿ ಸುಗ್ರೀವನ ಮುಂದೆಯೆ ನಿಲ್ಲಿಸಿ
ಕೊಂದೆನು ನಿನ್ನನು ಬಾಣದಲಿ ॥೯॥
ಮಾತನು ಕೊಟ್ಟೆನು ನಿನ್ನನು ಕೊಲ್ಲಲು। ನಿನ್ನಯ
ಸೋದರ ಸುಗ್ರೀವಗೆ।
ಕಾರ‍್ಯವ ಮಾಡಲು ತಕ್ಕದ ಯುಕ್ತಿಯ
ಮಾಡಲೆಬೇಕಾಯ್ತು ಕೇಳೀಗ ॥೧೦॥
ಮೊತದು ಸತ್ಯವು ಮಾತದು ನಿತ್ಯವು ಮಾತೇಕೇಳ್
ಪರಬ್ರಹ್ಮ।
ಮಾತದು ಕೊಟ್ಟರೆ ಮಾತದು ನಿಲ್ಲಲು।
ಯತನವೆ ಧರ್ಮದ ಸೂಕ್ಷ್ಮವದಯ್ಯ ॥೧೧॥
ದುಷ್ಟರ ಶಿಕ್ಷಿಸಿ ಶಿಷ್ಟರ ಪೊರೆವುದು। ಕ್ಷತ್ರಿಯ
ಧರ್ಮವೇ ಕೇಳಯ್ಯ।
ದುಷ್ಟನು ನೀನಲ ಶಿಕ್ಷಿಸೆ ನಿನ್ನನು
ಕ್ಷತ್ರಿಯ ಕಾರ‍್ಯವೆ ಮಾಡಿಹೆನು ॥೧೨॥

## ನಿರುದ್ಯೋಗಿಗಳೊಂದು ಮನವಿ

ನಮ್ಮ ದೇಶದಲ್ಲಿ ನಿರುದ್ಯೋಗ ಸಮಸ್ಯೆ ದೊಡ್ಡದು. ಈ ಬಗ್ಗೆ ಚಿಂತನ ಅಗತ್ಯ. ದೊಡ್ಡ ನಗರಗಳಲ್ಲಿ ಬೃಹತ್ ಕೈಗಾರಿಕೆಗಳ ಮತ್ತು ಅಧಿಕ ಉತ್ಪಾದನೆ ಆದ ಮಾತ್ರದಿಂದ ನಿರುದ್ಯೋಗಿಗಳ ಸಂಖ್ಯೆ ಕಡಿಮೆಯಾಗುವುದಿಲ್ಲ. ಇದಕ್ಕೆ ಅಮೇರಿಕಾ ಮೊದಲಾದ ರಾಷ್ಟ್ರಗಳು ನಿದರ್ಶನ.

ನಿರುದ್ಯೋಗ ನಿವಾರಣೆ ಸಾಧ್ಯವಾಗಬೇಕಾದರೆ ಉದ್ಯಮಿಗಳ ವಿಕೇಂದ್ರಿಕರಣವಾಗಬೇಕು. ಹೆಚ್ಚಿನ ಬಂಡವಾಳವಿಲ್ಲದ ಹೆಚ್ಚು ಜನರಿಗೆ ಉದ್ಯೋಗ ಒದಗಿಸಬಲ್ಲ ಉದ್ಯಮಗಳು ಆರಂಭವಾಗಬೇಕು. ಹಳ್ಳಿ ಹಳ್ಳಿಗಳಲ್ಲೂ ಸಣ್ಣ ಪ್ರಮಾಣದ ಉತ್ಪಾದನೆ ಸಾಧ್ಯವಾಗಬೇಕು. ನಮ್ಮಲ್ಲಿ ಬಹು ಜನರಿಗೆ ಸ್ವಂತ ಉದ್ಯಮವನ್ನು ಆರಂಭಿಸುವ ಇಷ್ಟವಿದ್ದರೂ ಅದನ್ನು ಕಾರ್ಯಗತಗೊಳಿಸುವಲ್ಲಿ ಬರುವ ಅಡಚಣೆಗಳು ಬಹಳ. ಇಂತಹ ಸಂದರ್ಭದಲ್ಲಿ ಪರಸ್ಪರ ನೆರವನ್ನು ಪಡೆಯಲು ಒಂದು ಸಹಕಾರಿ ವೇದಿಕೆ ಅಗತ್ಯ. ಈ ಬಗ್ಗೆ ಆಸಕ್ತಿಯಿರುವವರು ತಮ್ಮ ಅಭಿಪ್ರಾಯವನ್ನು ಈ ವಿಳಾಸಕ್ಕೆ ತಿಳಿಸಬೇಕಾಗಿ ವಿನಂತಿ.

ಎಂ. ಗಣೇಶನ್ ನಂ. 51, ಮಾಡಲ್ ಹೌಸ್ 3 ನೇ ಬೀದಿ, ಬಸವನಗುಡಿ, ಬೆಂಗಳೂರು-56004.





ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾಮಠ.

LICENCED TO POST WITHOUT PRE PAYMENT LICENCE NO. 3
Registred with theRegistrar of News papers for India under No. 17139/62
Reg No. KRN Q-9